ಶ್ರೀ ಶರೀಫ ಸಾಹಿತ್ಯ : ದಳ ೧

ಶ್ರೀ

# ...ಪರ ಜನಪ್ರಿಯ ಪದಗಳು

[ ... ಪರಿಚಯದೊಂದಿಗೆ ]



...ಪಾದಕರು :
.. ಡಿ. ಎಸ್. ಕರ್ಕಿ
ಶ್ರೀ ತಲ್ಲೂರ ರಾಯನಗೌಡರು

ಶ್ರೀ ಶರೀಫ ಸಾಹಿತ್ಯ ಸಮಿತಿ, ಶಿಶುವಿನಾಳ.
೧೯೬೨.

ಶಿಶುನಾಳಧೀಶನ ಭಾಷೆ ಒಂದೇ

# ಶರೀಫರ ಜನಪ್ರಿಯ ಪದಗಳು

[ ಕವಿ-ಕಾವ್ಯ ಪರಿಚಯದೊಂದಿಗೆ ]


ಸಂಪಾದಕರು :

ಡಾ. ಡಿ. ಎಸ್. ಕರ್ಕಿ

ಶ್ರೀ ತಲ್ಲೂರ ರಾಯನಗೌಡರು



ಶ್ರೀ ಶರೀಫ ಸಾಹಿತ್ಯ ಸಮಿತಿ, ಶಿಶುವಿನಾಳ.

೧೯೬೩.

ಬೆಲೆ : ಒಂದು ರೂಪಾಯಿ

# ಪರಿವಿಡಿ

ಮೊದಲ ಮಾತು

ಜನಪ್ರಿಯ ಪದಗಳು

ಭಾರತದ ಪರಂಪರೆಗಳು — ಬಾಲ್ಯ ಜೀವನ — ಗುರು ಹಾಗೂ ಸಾಕ್ಷಾತ್ಕಾರಗಳು — ಶರೀಫರ ವ್ಯಕ್ತಿತ್ವ — ಶರೀಫರ ಸಮಕಾಲೀನರು, ಶಿಶುನಾಳಧೀಶನ ಮುದ್ರಿಕೆಯ ರಹಸ್ಯ — ಶರೀಫರು ಸಂದರ್ಶಿಸಿದ ಕ್ಷೇತ್ರಯಾತ್ರೆಗಳು — ಶರೀಫರ ಪಶುಪಕ್ಷಿಗಳ ಸೃಷ್ಟಿಕ್ರಮ — ಹಾಡಿನ ಹಿನ್ನೆಲೆಗಳು — ಅಂತ್ಯದರ್ಶನ.

## ಮೊದಲ ಮಾತು

ಶ್ರೀ ಶರೀಫರ ಹಾಡುಗಳು ನಾಡಿನ ನಾಲಿಗೆಯ ಮೇಲೆ ನಲಿಯುತ್ತ-ಬಂದಿವೆ. ಅವರ ಒಂದು ಪದ ಕೇಳಿದರೆ ಸಾಕು, ಇನ್ನೊಂದನ್ನು ಕೇಳಬೇಕೆಂದೆನಿಸುತ್ತದೆ. ಒಂದನ್ನು ನುಡಿದರೆ ಇನ್ನೊಂದನ್ನು ರಾಗಿಸಬೇಕು ಎಂದು ಮನಸ್ಸು ಹಾರೈಸುತ್ತದೆ. ಈ ಪದಗಳ ರುಚಿಯೇ ಹಾಗೆ. ಅವುಗಳ ಭಾವಾನ:ಭಾವಗಳಲ್ಲಿ, ಪಲ್ಲವಿ ಅನುಪಲ್ಲವಿಗಳಲ್ಲಿ, ಪ್ರಾಸ ಅನುಪ್ರಾಸಗಳಲ್ಲಿ ನುಡಿಯ ಗಾರುಡಿಯಲ್ಲಿ,— ಒಟ್ಟಾಗಿ " ಶರೀಫತನದಲ್ಲಿ " ಯಾವದೋ ಒಂದು ಸೆಳೆತವಿದೆ. ಆದುದರಿಂದಲೇ ಶ್ರೀ ಶರೀಫರ ಗೀತಗಳು ಜನಪ್ರಿಯ ವಾಗಿವೆ.

ಶ್ರೀ ಶರೀಫರ ಹಾಡುಗಳು ಅನುಭವ ಪದಗಳ ವರ್ಗಕ್ಕೆ ಸೇರಿದವುಗಳು. ಅನುಭವ ಪದಗಳ ಪರಂಪರೆ ನಮ್ಮ ನಾಡಿನಲ್ಲಿ ಬಹು ಹಿಂದಿನಿಂದ ಬಂದ ಪರಂಪರೆ. ಸಮಾಜ ನೀತಿ ಹಾಗೂ ಉತ್ತಮ ಜೀವನ ತತ್ವಗಳೊಡನೆ ಆಧ್ಯಾತ್ಮವನ್ನು ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಸುಳುಹುಗಾಣಿಸಿದ ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರ ಕವಿ, ಸರ್ಪಭೂಷಣ ಶಿವ-ಯೋಗಿ, ಬಾಲಲೀಲಾ ಮಹಾಂತ ಶಿವಯೋಗಿ ಮೊದಲಾದ ಶಿವಶರಣ ಕವಿಗಳೂ, ಕನಕ ಪುರಂದರದಾಸ ಮೊದಲಾದ ಹರಿದಾಸ ಕವಿಗಳೂ ರಚಿ-ಸಿದ ಅನುಭವ ಪದಗಳು ಸುಪ್ರಸಿದ್ಧವಾಗಿವೆ. ಅವು ತತ್ವ ಬೋಧೆಗೆ ಮತ್ತು ನೀತಿ ಬೋಧೆಗೆ ಉತ್ತಮ ಸಾಧನಗಳಾಗಿವೆ. ಶರೀಫರ ತತ್ವಪದಗಳು ಇದೇ ಮಾದರಿಯ ಪದಗಳು. ಆದರೆ ಅವು ಜನಪದ ಭಾಷೆಯಲ್ಲಿ ಇಳಿದುಬಂದಿವೆ.

ಶರೀಫರು ಜನಪದ ಕವಿ. ಜನರ ದಿನ ಬಳಕೆಯ ಮಾತುಗಳಲ್ಲಿ ಪದ ಕಟ್ಟಿ ಹಾಡಿದ ಕವಿ. ಅವರು ತಮ್ಮ ಹಾಡುಗಳಿಗಾಗಿ ಬಳಸಿದ ಗತಿ ಗತ್ತುಗಳು ಜನಮನವನ್ನು ಒಮ್ಮೆಲೆ ಹಿಡಿಯುವಂಥವುಗಳು. ಶರೀಫರು ಲೀಲಾ ಜಾಲವಾಗಿ ಪ್ರಯೋಗಿಸಿದ ಛಂದ ಜನಪದ ಛಂದ. ಆದುದರಿಂದಲೆ ಅವರ ಹಾಡುಗಳು ಕೇಳಲು ಬಲು ಚಂದ. ಹಳ್ಳಿಯ ಬಾಳಿನ ಸಾಮಾನ್ಯ

ವಾದ ಆದರೆ ಸರಸವಾದ ಸನ್ನಿವೇಶಗಳಲ್ಲಿ ವಿಶೇಷವಾದ ಅರ್ಥವನ್ನೂ ಅನುಭವವನ್ನೂ ಇಟ್ಟು ಸರಳ ಸರಣಿಯಲ್ಲಿ ಪದ ಕಟ್ಟಿ ಹಾಡಿದ ಶ್ರೇಯಸ್ಸು ಶರೀಫರಿಗೆ ಸಲ್ಲುತ್ತದೆ. ಕಂಡ ಒಂದೊಂದು ಸಂಗತಿಯನ್ನು ತಟ್ಟನೆ ಪದಕ್ಕೆ ತಿರುಗಿಸುವ ಹದ ಅವರದು. ಅವರ ಹಾಡಿನಲ್ಲಿ ರೂಪಕ ರೂಪ ತೋರು ವದು ವಿಶೇಷ. ಅವರ ಪದದಲ್ಲಿ ಸುಳಿದ ಸನ್ನಿವೇಶ ತತ್ವದ ಸಂಕೇತವಾಗಿ ನಿಲ್ಲುತ್ತದೆ. ನಿರಾಕಾರವನ್ನು ಸಾಕಾರಗೊಳಿಸಿ ಅದನ್ನು ತಿಳಿ ನುಡಿಯಲ್ಲಿ ಸುಳುಹುಗಾಣಿಸುವ ಕಲೆ ಶರೀಫರಿಗೆ ಒಲಿದು ಬಂದಿದೆ. ಉದಾಹರಣೆಗಾಗಿ 'ಬಿದ್ದಿಯಬೇ ಮುದುಕೀ' ಎಂಬ ಪದದಲ್ಲಿ ಅವರು ಸಂಬೋಧಿಸಿದ ಮುದುಕಿ ಕೇವಲ ಮುದುಕಿಯಲ್ಲ; ಜಗದ ಜಂಜಡದಲ್ಲಿ ಸಿಕ್ಕು ತೊಳಲುವ ಹಳೆಯ ಜೀವ.

ಶರೀಫರ ಹಾಡುಗಳಲ್ಲಿ ಆಡುವ ವಾಣಿ ಜೀವವಾಣಿ. ಜೀವಕ್ಕೆ ಜೀವ ನುಡಿಯುವ ಜೀವಸ್ವರವದು. ಒಮ್ಮೆ ಅವರ ಸಖ್ಯದ ನುಡಿ ನಮ್ಮನ್ನು ಭಾವಲಹರಿಯಲ್ಲಿ ತೇಲಿಸಿದರೆ, ಇನ್ನೊಮ್ಮೆ ಮಬ್ಬಿನಲ್ಲಿ ಜೋಲಿ ಹೊಡೆ ಯುವ ನಮ್ಮನ್ನು ಅವರ ಪದ ಪಲ್ಲವಿ ಚಾಟಿಯ ಏಟಿನಂತೆ ಎಚ್ಚರಿಸು-ತ್ತದೆ. ಒಮ್ಮೆ ಅವರ ಪದ ನಮಗೆ ಚಕ್ಕಳಿ ಗುಳಿಯಿಡುವ ಬೆರಳಾದರೆ ಇನ್ನೊಮ್ಮೆ ನಮ್ಮ ಎದೆಯ ತಂತಿಯನ್ನು ಮಿಡಿದು ಮರುಕವನ್ನು ಹೊರ-ಹೊಮ್ಮಿಸುತ್ತದೆ. ಒಟ್ಟಿನಲ್ಲಿ ಶರೀಫರದು ಸಲುಗೆಯ ನುಡಿ, ಜೀವರಸ ದೊಡನೆ ಕೂಡಿಬಂದ ಹಸನಾದ ನುಡಿ.

ಶ್ರೀ ಶರೀಫರು ಜನಪದ ಕವಿಯಾಗಿದ್ದಂತೆ ತತ್ವಾನುಭವಿಯಾದ ಕವಿ. ಅವರ ಪುಣ್ಯ ವಿಶೇಷದಿಂದಾಗಿ ಕಳಸದ ಗುರು ಗೋವಿಂದರು ಅವ ರಿಗೆ ಗುರುವಾಗಿ ದೊರೆತರು. ಇದರಿಂದಾಗಿ ಚಿತ್ತಲಹರಿಯನ್ನು ಅವಲಂಬಿ ಸಿದ ಶರೀಫರ ಪರತತ್ವ ಗೀತಶಕ್ತಿಗೆ ಗರಿ ಮೂಡಿರಬೇಕು. ಗುರು ಸಂಪರ್ಕ ಅವರ ಕವಿತ್ವಕ್ಕೆ ನಿಶ್ಚಯಾತ್ಮಕವಾದ ಗತಿಯನ್ನು ನೀಡಿರಬೇಕು. ಗುರಿ-ಯನ್ನು ತೋರಿರಬೇಕು. ಸರಿ " ಬರಕೋ ಪದ ಬರಕೋ " ಎನ್ನುವ ಭರದೊಡನೆ ಪದಗಳು ಸರ ಸರ ರಚನೆಗೊಂಡವು. ಅನುಭವಗೀತ, ರಿವಾಯತ್‌ಗೀತ, ಲಾವಣಿ ಪದ, ಹೋಳೀಪದ, ಕಾಲಜ್ಞಾನ, ದಂಡಕ—

ಹೀಗೆ ಅನೇಕ ಬಗೆಯ ಹಾಡುಗಳು ಅವುಗಳಿಗೆ ಸರಿಹೋಗುವ ಮಟ್ಟಗ ಳಲ್ಲಿ ರೂಪತೊಟ್ಟು ಬಂದವು.

ಶ್ರೀ ಶರೀಫರ ಪದಗಳ ಈ ಹದ ಸಾಮಾನ್ಯವಾದುದಲ್ಲ. ಜನ್ಮ ದಿಂದಲೇ ಅವರಿಗೆ ಒದಗಿಬಂದಿರಬಹುದಾದ ಸಂಪ್ರದಾಯ ಸಂಸ್ಕೃತಿ, ಅವರ ಕಾಲದಲ್ಲಿ ಸುತ್ತುಮುತ್ತಲಿನ ವಾತಾವರಣದಲ್ಲಿ ತೇಲುತ್ತಿದ್ದ ಶಿವ-ಸಂಸ್ಕೃತಿ, ಗುರುವಿನ ಅನುಗ್ರಹದಿಂದ ಅವರ ಮನದಲ್ಲಿ ಇಳಿದ ಅಧ್ಯಾತ್ಮ-ಸಂಸ್ಕೃತಿ, ಸರಳ ಜೀವಿಯಾದ ಶರೀಫರಲ್ಲಿ ಮುಪ್ಪುರಿಗೊಂಡು ಅವರಲ್ಲಿ ವಿಶಾಲವಾದ ಭಾವನೆಯನ್ನು ಬೆಳೆಸಿದವು. ಸಂಕುಚಿತ ಮತಭಾವನೆ ಯನ್ನು ಮೀರಿದ ವ್ಯಾಪಕ ದೃಷ್ಟಿಯನ್ನು, ಉದಾರ ಮನೋಭಾವವನ್ನು ಅವರ ಪದಗಳು ಎತ್ತಿ ತೋರುತ್ತವೆ. ಕನ್ನಡಿಗರ ಮನೋಧರ್ಮದ ಲಕ್ಷಣ ಗಳಲ್ಲಿ ಒಂದಾದ ಧರ್ಮ ಸಮನ್ವಯ ದೃಷ್ಟಿ ಶರೀಫರಲ್ಲಿ ಎದ್ದು ಕಾಣು-ತ್ತದೆ. ಬೆಳಕನ್ನು ಎಲ್ಲೆಡೆಗಳಿಂದಲು ಎದೆ ತೆರೆದು ಬರಮಾಡಿಕೊಳ್ಳುವ ಅವರ ಮನೋವೃತ್ತಿ ಇದಕ್ಕೆ ಮುಖ್ಯ ಕಾರಣ. ಇದರಿಂದಾಗಿ ಅವರ ಅನುಭವದ ಪಾತ್ರೆ ತುಂಬಿತು. ಅವರ ಮತಿಗೆ ಗತಿ ದೊರೆಯಿತು. ಗತಿಗೆ ಮತಿ ದೊರೆಯಿತು. ಎಲ್ಲ ಯೋಗವೂ ಶಿವಯೋಗದ ಶೃತಿಯಾಗಿ ಅವರ ಪದಗಳಿಗೆ ರಸರಾಗವನ್ನು ನೀಡಿತು. ಸಂಪ್ರದಾಯದ ಆವರಣದಲ್ಲಿ ಅವರ ಜೀವಾತ್ಮ ಪ್ರಣವನಾದ ಮಾಡಿ ಹೊಸ ಜೇನಿನ ಹುಟ್ಟು ಕಟ್ಟಿತು. "ಬೋಧ ಒಂದೇ ಬ್ರಹ್ಮನಾದ ಒಂದೇ" ಎಂಬ ಏಕೋಭಾವ ಅವರ ತತ್ವದ ಪದಗಳ ತಿರುಳಾಯಿತು.

ಇದೆಲ್ಲ ಸರಿ; ಆದರೆ ಶರೀಫರ ಹಾಡುಗಳಿಗೆ ಹಳ್ಳಿಯಲ್ಲಿ ದೊರೆತ ಪ್ರಚಾರ, ಪಟ್ಟಣಗಳಲ್ಲಿ ಇನ್ನೂ ದೊರೆಯಬೇಕಾಗಿದೆ. ಅವರ ಪದಗಳಲ್ಲಿದ್ದ ಉತ್ತಮ ಸಾಹಿತ್ಯವನ್ನು ಸಾಹಿತ್ಯಜ್ಞರು ಇನ್ನೂ ಅರಿಯಬೇಕಾಗಿದೆ. ರಸಾನುಭವವನ್ನು ಪಡೆಯಬೇಕಾಗಿದೆ. ಈ ಸದುದ್ದೇಶದ ಪ್ರೇರಣೆಯಿಂದ ಕಾರ್ಯಪ್ರವೃತ್ತರಾದ ಶಿಶುನಾಳ ಶರೀಫ ಸಾಹಿತ್ಯ ಸಮಿತಿಯವರು ಸಮಾ ಲೋಚಿಸಿದಂತೆ, ಶ್ರೀ ಶರೀಫರ ಕೆಲವೊಂದು ಜನಪ್ರಿಯ ಪದಗಳನ್ನು ಆಯ್ದು, ಒಂದೊಂದು ಪದ ಪದ್ಯಗಳನ್ನು ಹೊಸ ಭಾವಗೀತಗಳ ಚೌಕಟ್ಟ

ನಲ್ಲಿ ಎದ್ದು ಕಾಣುವಂತೆ ಕೂರಿಸಿ, ಹೀಗೆ ಹೊಂದಿಸಿದ ಹಾಡುಗಳನ್ನು ಒಂದು ಕ್ರಮದಲ್ಲಿ ಪವಣಿಸಿ ಪದ ಪರಿಚಯದೊಡನೆ ಸಂಪಾದಿಸಿ ಸಾಧ್ಯವಿದ್ದ ಮಟ್ಟಿಗೆ ಮುದ್ದಾಗಿ ಮುದ್ರಿಸಿ ರಸಿಕ ಕನ್ನಡಿಗರ ಕೈಗೆ ನೀಡಬೇಕೆಂಬ ಛಲ ಈ ದಳದಲ್ಲಿ ಬೆಳಕು ಕಂಡಿದೆ. ಈ ಕಿರು ಹೊತ್ತಿಗೆಯ ಒಂದೊಂದು ಪದ ಹಾಗೂ ಎಡ ಪಕ್ಕದಲ್ಲಿ ಆ ಪದದ ಭಾವ ಪರಿಚಯ ಮಾಡಿದುದನ್ನು ಗುರುತಿಸಬಹುದು. ಈ ಯೋಜನೆ ಶರೀಫರ ಪದಗಳನ್ನು ತಿಳಿದುಕೊಳ್ಳಲು ನೆರವಾಗಬಹುದೆಂದು ನಂಬಲಾಗಿದೆ. ಸಾಹಿತ್ಯಜ್ಞರ ಗಮನವನ್ನು ಶರೀಫರ ಪದಗಳತ್ತ ಸೆಳೆಯಲು ಈ ಹೊತ್ತಿಗೆಯು ತಕ್ಕಮಟ್ಟಿಗಾದರೂ ಕಾರಣವಾ-ಗದೆ ಇರದು, ಎಂಬ ಭರವಸೆ ಸಂಪಾದಕರಿಗಿದೆ. ರಸಿಕರು ಇದನ್ನು ಸ್ವಾಗತಿಸಿದರೆ ಶ್ರೀ ಶರೀಫ ಸಾಹಿತ್ಯ ಸಮಿತಿಯವರು ಹೊರಡಿಸಲಿರುವ ಮುಂದಿನ ಪ್ರಕಟನೆಗಳಿಗೆ ತಕ್ಕಪ್ರಚೋದನೆ ದೊರೆಯುವದರಲ್ಲಿ ಸಂದೇಹವಿಲ್ಲ.

ಈ ಸಂಪಾದನೆಯಲ್ಲಿ ಸೇರಿದ ಕೆಲವೊಂದು ಗೀತಗಳನ್ನು ಶ್ರೀ ಶರೀಫರ ವಂಶಜರಾದ ಶ್ರೀ ಹಜರತಸಾಹೇಬ (ಶಿಶುವಿನಾಳ) ಅವರು ಭಾವಪೂರ್ಣ ವಾಗಿ ಹಾಡಿದ್ದನ್ನು ಕೇಳಿ ಸಾಧ್ಯವಿದ್ದ ಮಟ್ಟಿಗೆ ಪದಗಳನ್ನು, ಆ ಪದಗಳ ಶುದ್ಧ ಸ್ವರೂಪವನ್ನು ಇಲ್ಲಿ ಮೂಡಿಸಲು ಯತ್ನಿಸಿದ್ದೇವೆ. ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲಬೇಕು. ಈ ಪುಸ್ತಕವನ್ನು ಕಡಿಮೆ ವೇಳೆಯಲ್ಲಿ ಅಂದ ವಾಗಿ ಮುದ್ರಿಸಿಕೊಟ್ಟ ಹುಬ್ಬಳ್ಳಿಯ "ಶ್ರೀ ರೇಣುಕಾ ಪಾವರ ಪ್ರಿಂಟಿಂಗ ಪ್ರೆಸ್ಸಿ"ನ ಕಾರ್ಯಕರ್ತರ ಶ್ರಮವನ್ನು ಓದುಗರು ಪ್ರಶಂಸಿಸದೆ ಇರಲಾರ ರೆಂದು ಆಶಿಸುವೆವು.

— ಡಿ. ಎಸ್. ಕರ್ಕಿ

# ಬೋಧ ಒಂದೇ

ಶ್ರೀ. ಶರೀಫರ ಕಿರಿ ಪದಗಳಲ್ಲಿ ಇದು ಒಂದು. ಆದರೆ ಇದರಲ್ಲಿ ಒಂದು ಹಿರಿಯ ಅರ್ಥ ಭಾವಪೂರ್ಣವಾಗಿ ಬಂದಿದೆ. ಆಧ್ಯಾತ್ಮದ ನಾದ ಬಿಂದು ಕಳೆ–ಇವು ಇಲ್ಲಿ ಸುಳವು ದೋರಿವೆ. ನಾದದ ಸುಖ, ಬಿಂದುವಿನ ಆನಂದ, ಕಳೆಯ ಕಳೆ–ಇವುಗಳನ್ನು ಈ ಹಾಡು ಒಳಗೊಂಡಿದೆ. ಶರೀಫರು ಎದೆ ತುಂಬಿ ಹಾಡಿದ ಪದವಿದು.

"ಬೋಧ ಒಂದೇ ಬ್ರಹ್ಮನಾದ ಒಂದೇ" ಎಂಬ ಪ್ರಾರಂಭದ ಚರಣ ಮನವನ್ನು ಸೂರೆಗೊಳ್ಳುವಂತಿದೆ. ವಿಶಾಲದೃಷ್ಟಿ, ಉದಾರ ಹೃದಯ, ಮಧುರನಾದ–ಇವುಗಳ ಸಮ್ಮಿಲನ ಈ ಪದದ ವೈಶಿಷ್ಟ್ಯ. ನಾದಪೂರ್ಣ ವಾದ, ಆನಂದಪೂರ್ಣವಾದ ಬೋಧ ಇಲ್ಲಿದೆ. ಇದರ ರಾಗ ಸೊಗಸಾದುದು.

ಎಲ್ಲ ತತ್ವಗಳ ಮೂಲ ಒಂದೇ ಎಂಬ ವಿಶಾಲ ತತ್ವವನ್ನು ಈ ಹಾಡು ಎತ್ತಿ ಹಿಡಿದಿದೆ ಅಂತರಂಗದ ಅನುಭವ ಇಲ್ಲಿ ಪದವಾಗಿ ಹೊಮ್ಮಿದೆ–ಎಂದು ಹೇಳಬಹುದು.

ಪ್ರತಿ ಚರಣದ ಕೊನೆಯಲ್ಲಿ ಬರುವ 'ಒಂದೇ' 'ಒಂದೇ' ಎಂಬ ಶಬ್ದ ನಮ್ಮ ಮನದ ಮಂದಿರದಲ್ಲಿ ಪ್ರತಿಧ್ವನಿಗೊಳ್ಳುವಂತೆ ಅನುಭವವಾಗುತ್ತದೆ.

ಈ ಪದದ ಪ್ರಾಸ ನಿಜವಾಗಿಯೂ ಪರಿಣಾಮಕಾರಕವಾದುದು.

# ಬೋಧ ಒಂದೇ

ಬೋಧ ಒಂದೇ ಬ್ರಹ್ಮ-
ನಾದ ಒಂದೇ ‖ ಪಲ್ಲ ‖

ಸಾಧನ ಮಾಡುವ ಹಾದಿ ಒಂದೇ
ಆದಿ ಪದ ಒಂದೇ. ‖ ಅನುಪಲ್ಲ ‖

೧

ಬಿಂದು ಒಂದೇ ನಿಜಾ-
ನಂದ ಒಂದೇ
ತಂದೆ ಸದ್ಗುರು ಗೋವಿಂದಗ ಒಂದೇ
ಅಂದಿಗಿಂದಿಗೊಂದೇ

೨

ದೋಷ ಒಂದೇ ನಿರ್
ದೋಷ ಒಂದೇ
ಶಿಶುನಾಳಧೀಶನ ಭಾಷೆ ಒಂದೇ
ಭವ ನಾಶ ಒಂದೇ

# ಶ್ರೀ ಗುರು ಮಂತ್ರ

ಶ್ರೀ ಗುರು ಮಂತ್ರದ ಮಹತ್ವವನ್ನು ಬಿತ್ತರಿಸುವ ಪದವಿದು. ಅದರಿಂದ 'ಬೋಧ ಸಂಪದ ಸುಖ' ಉಂಟಾಗುವುದೆಂಬುದನ್ನು ಶರೀಫರು ಅನುಭವದಿಂದ ಅರಿತು ಆಡಿದ್ದಾರೆ; ಹಾಡಿದ್ದಾರೆ. 'ಭೋಗ ಸಂಪದ ಸುಖ' ಎಂದು ಬಳಸಿದ ವಿಶಿಷ್ಟವಾದ ಪದಪ್ರಯೋಗವೇ ಈ ಮಾತಿಗೆ ಸಾಕ್ಷಿ.... ಈ ಸುಖ ದೊರೆಯಬೇಕಾದರೆ ಗುರುಮಂತ್ರವನ್ನು 'ಹಸನಾಗಿ' ಭಜಿಸಬೇಕೆಂದು ಅವರು ಮಾರ್ಗ ದರ್ಶನ ಮಾಡಿದ್ದಾರೆ.

ಈ ಹಾಡಿನ ದಾಟಿಯಲ್ಲಿಯೇ ಒಂದು ಸುಖವಿದೆ. ಯಾವ ಎಡೆತಡೆಯಿಲ್ಲದೆ ಸರಾಗವಾಗಿ ಹರಿಯುವ ನಾದಪ್ರವಾಹವನ್ನು ನೆನಪಿಗೆ ತರುತ್ತದೆ ಈ ಪದದ ರಾಗ. ಮೂರು ಮೂರು ಕಿರಿ ಚರಣಗಳ ಕಿರಿ ಪದ್ಯಗಳು ಇದರಲ್ಲಿ ಹದವಾಗಿ ಹೊಂದಿಕೊಂಡಿವೆ. ಆದಿಪ್ರಾಸವನ್ನು ಒಳಗೊಂಡ ಈ ಪದ್ಯಗಳು ಹೃದ್ಯವಾಗಿವೆ.

ಈ ಹಾಡಿನ ಶೈಲಿ ಸರಳವಾಗಿರುವಷ್ಟೇ ಶುದ್ಧವಾಗಿದೆ. ಶರೀಫರ ಮಾತಿನಲ್ಲಿ ಹೇಳಬೇಕೆಂದರೆ ಈ ಹಾಡು ನಿಜವಾಗಿಯೂ ಹಸನಾಗಿದೆ. ರಸನೆಗೆ ರುಚಿಯಾಗಿದೆ.

ಶ್ರೀ ಶರೀಫರು ಗುರುಗೋವಿಂದರಲ್ಲಿ ಇಟ್ಟ ಗುರುಭಕ್ತಿ ಅಷ್ಟಿಷ್ಟಲ್ಲ. ಒಂದೆರಡು ಪದಗಳಲ್ಲಿ ಶರೀಫರು ಗುರುಗೋವಿಂದರನ್ನು 'ರಸಿಕ ರಾಜ ಗೋವಿಂದ' ಎಂದು ಹೆಸರಿಸಿದುದುಂಟು.

# ಶ್ರೀ ಗುರು ಮಂತ್ರ

ಶ್ರೀ ಗುರು ಮಂತ್ರವ
ರಾಗದಿ ನುತಿಸಲು
ಬೋಧ ಸಂಪದ ಸುಖವಾಗುವದೋ ‖ ಪಲ್ಲ ‖

೧

ಮೂಜಡೆ ಮಂತ್ರದ
ಮೊದಲಕ್ಷರವ
ತೇಜಿಸುತಲಿ ನಿತ್ಯ ಜಪಿಸುವದೋ

೨

ಬಿಡದೆರಡಕ್ಷರ
ನಡುವಿನ ಶೂನ್ಯದಿ
ದೃಢವಿಡಿದಾತ್ಮದಿ ನುತಿಸುವದೋ

೩

ಬರೆದು ಪೂರಕ್ಷರ
ಕರುಣ ಸೇವಿಸಿದರೆ
ಜನನ ಮರಣ ಭಯ ನೀಗುವದೋ

೪

ನೀ ಕಲಿ ಸುಮ್ಮನೆ
ನಾಲ್ಕು ಅಕ್ಷರಗಳ
ಬೇಕೆನಿಸಿದ ವಸ್ತು ಸಿಗುತಿಹುದೋ

೫

ಶಿಶುನಾಳಧೀಶನ
ಹೆಸರಿನೈದಕ್ಷರ
ಹಸನಾಗಿ ಭಜಿಸಲಹುದೆನಿಸುವದೋ

# ದೊರಕಿದಾ ಗುರು

ಗುರು ದೊರಕಿದುದರಿಂದ ಶರೀಫರಿಗೆ ಆದ ಆನಂದ ಅಷ್ಟಿಷ್ಟಲ್ಲವೆಂಬು ದನ್ನು ಈ ಪದ ಎತ್ತಿ ತೋರುತ್ತದೆ. ಅವರಿಗೆ ದೊರೆತ ಗುರು ಗುರುಗೋವಿಂದರು. ಅವರ ಪ್ರಥಮ ಸಂದರ್ಶನಕ್ಕೆ ಶರೀಫರ ಹೃದಯ ಹರುಷದಿಂದ ಸ್ಪಂದಿಸಿರಬಹುದು. ಆಗ ಅವರ ಹೃದಯ ನರ್ತಿಸಿದಂತೆ ಈ ಪದದ ಛಂದವೂ ನರ್ತಿಸಿದೆ! ಪದದ ಓಟ ಗುರು ದೊರಕಿದುದರಿಂದ ಆದ ಭಾವದ ಆವೇಗವನ್ನು ಕನ್ನಡಿಸುತ್ತದೆ. ಹಾಡಿನ ದಾಟಿ ಕೂಡ ಮನದ ಇಂಗಿತವನ್ನು ಸುಳುಹುಗಾಣಿಸಲು ಸಹಾಯಕಾರಿಯಾಗಬಲ್ಲುದೆಂಬು ದನ್ನು ಈ ಪದವನ್ನು ಹಾಡಿ ಮನಗಾಣಬಹುದು.

'ಶಿಶುನಾಳಧೀಶನ ಪ್ರಕಾಶ' .'ಅಸಮತೇಜ ರೂಪರಾಶಿ'—ಮೊದ ಲಾದ ಪ್ರಯೋಗಗಳು ಗುರುಭಕ್ತಿ ಭಾವ ಪ್ರಕಾಶನ ಶಕ್ತಿಗೆ ಸಾಕ್ಷಿಯಾಗಿವೆ.

ಆದಿಪ್ರಾಸ ಈ ಪದದಲ್ಲಿ ನಿಯತವಾಗಿ ಸಮಾವೇಶವಾಗಿದೆ. ಹಾಡಿಗೆ ಹೆಚ್ಚಿನ ಶೋಭೆಯನ್ನು ನೀಡಿದೆ.

ಗುಡಿಗೇರಿಗೆ ಹೋಗಿ ಶರೀಫರ ತಂದೆ ಶರೀಫರನ್ನು ಗುರುಗೋವಿಂದ ರಿಗೆ ಮಗನಂತೆ ಸ್ವೀಕರಿಸಲು ಹೇಳಿ ಒಪ್ಪಿಸಿದರಂತೆ.... ಗುರು ದೊರೆತುದ ರಿಂದ ಅತ್ಯಂತ ಆನಂದವುಂಟಾಗಿ ಶರೀಫರು ಈ ಪದವನ್ನು ಹಾಡಿರಬೇಕು. ಈ ಬಗೆಗೆ ವಿವರಗಳನ್ನು ಇನ್ನು ಬರಲಿರುವ ಪ್ರಕಟನೆಗಳಲ್ಲಿ ಕಾಣಬಹುದು.

# ದೊರಕಿದಾ ಗುರು

ದೊರಕಿದಾ| ಗುರು| ದೊರಕಿದಾ ||ಪಲ್ಲ||

ಪರಮಾನಂದ ಬೋಧ
ಅರಿವಿನೊಳಗೆ ಬಂದು
ದೊರಕಿದಾ| ಗುರು| ದೊರಕಿದಾ ||ಅನುಪಲ್ಲ||

೧

ಕರಪಾತ್ರೆ ಹಿಡಿದು ಈ
ನರ ಶರೀರದಿ ತನ್ನ
ಅರುವ ತನಗೆ ತೋರಿ
ಪರಮ ನಂಬಿಗೆಯಲಿ
ದೊರಕಿದಾ| ಗುರು| ದೊರಕಿದಾ

೨

ಹಿಂದೆ ಜನ್ಮಾಂತರ
ಒಂದು ಉಳಿಯದಂತೆ
ಒಂದು ವಸ್ತುವಿನೊಳು
ಚಂದದಿಂದಲಿ ಬಂದು
ದೊರಕಿದಾ| ಗುರು| ದೊರಕಿದಾ

೩

ಶಿಶುನಾಳಧೀಶ ಪ್ರ-
ಕಾಶ ಗೋವಿಂದನ
ಅಸಮ ತೇಜೋ ರೂಪ
ಕಿರಣದಿಂದಲೆ ಬಂದು
ದೊರಕಿದಾ| ಗುರು| ದೊರಕಿದಾ

# ಸದ್ಗುರು ಸಾಕಿದ ಮದ್ದಾನಿ

ಇಲ್ಲಿ ಶರೀಫರು ತಮ್ಮನ್ನು ಮದ್ದಾನೆಗೆ ಹೋಲಿಸಿಕೊಂಡಿದ್ದಾರೆ. ಕಳಸದ ಗುರುಗೋವಿಂದರು ಅವರ ಸದ್ಗುರು ಎಂಬುದನ್ನು ಗಮನಿಸಿದರೆ ಈ ಪದದ ಅರ್ಥವಾದೀತು.

ಮದ್ದಾನೆ ಬರುವ ರೀತಿಯನ್ನು ಈ ಪದ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಶ್ರೀ ಶರೀಫರ ಚಿತ್ರಶೈಲಿಗೆ ಈ ಹಾಡು ಸಾಕ್ಷಿಯಾಗಿದೆ.

ದುಷ್ಟರ ಅಷ್ಟಮದಗಳನ್ನು ಮರ್ದಿಸಲು ಈ ಮದ್ದಾನೆಯ ಆವೇಶ ಉಪಯೋಗವಾಗುತ್ತದೆ ಎಂಬ ಸೂಚನೆ ಇಲ್ಲಿದೆ. ಪ್ರಣವ ಸ್ವರೂಪಕ್ಕೆ ದೃಷ್ಟಿಯಿಟ್ಟು ನಡೆದು ಘನ ಸುಖವನ್ನು ಪಡೆಯಬೇಕೆಂದು ಈ ಪದದ ತಿರುಳು.

"ಸದ್ಗುರು ಸಾಕಿದ ಮದ್ದಾನಿ ಬರುತಿದೆ"–ಎಂದು ಪ್ರಾರಂಭವಾಗುವ ಈ ಪದದ ಭಾಷೆ ಈ ಪದದ ಉದ್ದಕ್ಕೆ ಹರಿದ ಭಾವವನ್ನು ಮೂಡಿಸುವಂತಿದೆ.

ಅಂಶಗಣವನ್ನು ಒಳಗೊಂಡ ಈ ಹಾಡಿನ ದಾಟ ಸರಾಗವಾಗಿ ಹಾಡಲು ಅನುಕೂಲವಾಗಿದೆ.

ಶ್ರೀ ಶರೀಫರಿಗೆ ಒಂದು ಸಂದರ್ಭದಲ್ಲಿ ಒದಗಿದ ಅನುಭವ ಈ ಪದದ ರಚನೆಗೆ ಕಾರಣವಾಯಿತು ಎಂದು ಹೇಳುತ್ತಾರೆ.

ಗುರು ಗೋವಿಂದರು ತಮ್ಮ ಶಿಷ್ಯೋತ್ತಮರಾದ ಶರೀಫರಗುಣಗಳನ್ನು ಮೆಚ್ಚಿ ಅವರೇ ಶರೀಫರನ್ನು ಮದ್ದಾನೆಗೆ ಹೋಲಿಸಿ ಈ ಪದದಲ್ಲಿ ಆನಂದದ ಉದ್ಗಾರವನ್ನು ತೆಗೆದರೆಂಬ ಪ್ರತೀತಿಯೂ ಉಂಟು.

# ಸದ್ಗುರು ಸಾಕಿದ ಮದ್ದಾನಿ

ಸದ್ಗುರು ಸಾಕಿದ ಮದ್ದಾನಿ ಬರುತಿದೆ
ಎದ್ದು ಹೋಗಿರಿ ಇದ್ದ ನಿಂದಕರು ॥ ಪಲ್ಲ ॥

೧

ಬಿದ್ದು ಈ ಭವದೊಳು ಹೊರಳಾಡೊ ಜನರನ್ನು
ಉದ್ಧಾರ ಮಾಡುತ ಬರುತಲಿದೆ

೨

ಆಕಾಶ ನೋಡುತ ವಾಯುವ ನುಂಗುತ
ಝೇಂಕರಿಸುತಲದು ಬರುತಲಿದೆ

೩

ಅಷ್ಟ ಮದಗಳಂಬೋ ಕೆಟ್ಟ ನೀಚರನ್ನು
ಸಿಟ್ಟಲೆ ಸೀಳುತ ಬರುತಲಿದೆ

೪

ಪ್ರಣವ ಸ್ವರೂಪವ ಅನುದಿನ ನೋಡುತ
ಘನ ಸುಖದಲಿ ಅದು ಬರುತಲಿದೆ

೫*

ಮನವ ಶಿಶುನಾಳಧೀಶನೋಳು ಮಗ್ನಮಾಡಿ
ಚಿನುಮಯಾತ್ಮಕವಾಗಿ ಬರುತಲಿದೆ.

* ಪಾಠಾಂತರ

"ತಣಿವ ಕಲ್ಮೇಶನೊಳು ಮನವ ಮಗ್ನವ ಮಾಡಿ
ಚಿನುಮಯಾತ್ಮಕವಾಗಿ ಬರುತಲಿದೆ"

# ನಡಿಯೊ ದೇವರ ಚಾಕರಿಗೆ

ಮುಕ್ತಿಗೊಡೆಯನಾದ ಪರಮಾತ್ಮನ ಚಾಕರಿಗೆ ಜೀವಾತ್ಮನನ್ನು ಕರೆಯುವ ಭಕ್ತಿಯ ಪದವಿದು. ನಾಮರೂಪ ಕ್ರಿಯಾರಹಿತನಾದ ಪರಮಾತ್ಮನ ಸ್ವರೂಪವನ್ನು ಇಲ್ಲಿ ನಿರೂಪಿಸಲಾಗಿದೆ. ಜೀವದಲ್ಲಿ ಮಂತ್ರವನು ಜಪಿಸಿದರೆ ಮಾತ್ರ ಈ ಪರಮಾತ್ಮನ ಸಾಕ್ಷಾತ್ಕಾರ ಸಾಧ್ಯವೆಂಬ ಅನುಭವ ಈ ಪದದಲ್ಲಿ ನಿನದಿಸಿದೆ.

'ಜೀವ ಪರಮರು' ಒಂದುಗೂಡಲು ಭಕ್ತಿಯ ಸೇವೆಯೊಂದೇ ಸಾಧನವೆಂದು ಶ್ರೀ ಶರೀಫರು ಇಲ್ಲಿ ನಿರೂಪಣ ಮಾಡಿದ್ದಾರೆ. 'ಜೀವದಲಿ ಮಂತ್ರವನು ಜಪಿಸು' ಎಂಬ ಚರಣದಲ್ಲಿ ಈ ಪದದ ಸಂದೇಶ ಅಡಗಿದೆ ಈ ಮಾತಿನಲ್ಲಿ ಅನುಭವವು ಸೂಸಿದ ಹೊಸತನ ಕಾಣುತ್ತದೆ.

ಶ್ರೀ ಶರೀಫರ ನುಡಿ ನಿರಾಡಂಬರವಾದದು; ಸರಳವಾದುದು. ಆದರೆ ಮಾರ್ಮಿಕವಾದುದು. ಈ ಪದದಲ್ಲಿ ಬಳಕೆಯಾದ 'ಚಾಕರಿ' 'ಮೋಜಿಲಿ' ಇವೇ ಮೊದಲಾದ ಜನಪ್ರಿಯ ಶಬ್ದಪ್ರಯೋಗಗಳನ್ನು ಈ ಸಂದರ್ಭದಲ್ಲಿ ಗಮನಿಸಬೇಕು.

# ನಡಿಯೊ ದೇವರ ಚಾಕರಿಗೆ

ನಡಿಯೊ ದೇವರ ಚಾಕರಿಗೆ| ಮುಕ್ತಿ-
ಗೊಡೆಯ ಖಾದರಲಿಂಗ ನೆಲಸಿರ್ಪ ಗಿರಿಗೆ ||ಪಲ್ಲ||

ಎಡಬಲದಿ ನೋಡುತಲಿ ಷಣ್ಮುಖ
ಒಡಲೊಳಗೆ ತನ್ಮನವ ಸೇರಿಸಿ
ಕಡುವಿಷಯ ಕರುಣಾಬ್ಧಿಗಳು ಕೈ
ಹೊಡೆದು ಮುಂದಕೆ ಓಡುತೋಡುತ..........

೧

ಬಯಲೊಳು ಬಯಲ ಪುಟ್ಟಸಿದಾ | ನಿಲ್
ಬಯಲಿನೊಳಗೆ ತನ್ನಾಲಯವ ಕಟ್ಟಸಿದಾ
ಭವ ನಿವಾರಣ ಭಕ್ತ ವತ್ಸಲ
ಆಹುದೆನಿಸಿ ನಿಶ್ಚಯಿಸಿ ಮನದೊಳು
ತವಕ ತೂರ್ಯದ ಲಕ್ಷದಿಂದಲಿ
ಭವ ಸಮುದ್ರವ ದಾಟು ದಾಟುತ..........

೨

ಆ ಮಹಾಮಹಿಮ ಪೇಳಿದನು | ಈ
ಭೂಮಿಯೊಳ್ ಹುಲಗೂರ ಗ್ರಾಮಕಿಳಿದನು
ನಾಮರೂಪ ಕ್ರಿಯಾ ಕಲಾಪದಿ
ಸೀಮೆಯನು ಗೆಲಿದಂಥ ಸ್ವಾಮಿಯ
ನೇಮ ಹಿಡಿದಾತ್ಮನೊಳು ಭಜಿಸುತ
ಕಾಮ ಕ್ರೋಧವ ಕಾಲಿಲೊದೆದು..............

೩

ಜೀವ ಪರಮರೊಂದುಗೂಡಿ ಅನು-
ಭಾವದಿ ಸಾಯುಜ್ಯ ಪದವಿಯ ಬೇಡಿ
ಕಾಯಿಸಕ್ಕರಿ ಊದನೀಡುತ
ಜೀವದಲಿ ಮಂತ್ರವನು ಜಪಿಸುತ
ಠಾವು ಶಿಶುವಿನಾಳಿಂದ ಹೊರಟು
ಮಾಯಿಯನು ಮುರಿದೆತ್ತಿ ಮೌಜಿಲಿ.......

# ಪದವ ಬ್ಯಾಗನೆ ಕಲಿ ಕಲಿ

ಅನುಭವ ಪದಗಳ ಮೇಲೆ ಕಟ್ಟಿದ ಪದವಿದು. ಶರೀಫರು ತಮ್ಮ ಪದಗಳ ಗುಟ್ಟನ್ನೇ ಇಲ್ಲಿ ಹೇಳಿದ್ದಾರೆ. ಹೊರಗಿನ ಕಟ್ಟುನಿಟ್ಟುಗಳಿಗೆ ಒಳಗಾಗದ ಪದವೇ ಪದ ಎಂಬುದು ಈ ಪದದ ಸಂದೇಶ. ಪದ ಸಹಜವಾಗಿರಬೇಕು; ಸುಲಭವಾಗಿರಬೇಕು; ತನ್ನ ಗುರಿಯನ್ನು ಅದು ಸ್ವಯಂಪ್ರೇರಿತವಾದ ಸಂಗೀತ ಸ್ವರಗಳೊಡನೆ ಮುಟ್ಟಬೇಕು; ಎಂಬ ಭಾವ ಇಲ್ಲಿ ಒಡಮೂಡಿದೆ. ಪದಕ್ಕೆ ಕಟ್ಟು ನಿಟ್ಟುಗಳು ಹೊರೆಯಾಗಬಾರದು; ಅಡಿ, ಗಣ ಪ್ರಾಸ ಇವು ಸ್ವಾಭಾವಿಕವಾಗಿ ಬರಬೇಕು. ಹಾಗೆ ಪದದಲ್ಲಿ ಗಣ ಪ್ರಾಸ—ಎಲ್ಲವೂ ಬಂದಿದೆ.

'ಲಯ ಪ್ರಳಯಕೆ ಒಳಗಾಗದ ಪದವು'—ಎಂಬ ಚರಣದಲ್ಲಿ ಧ್ವನಿಯಿದೆ; ಇಲ್ಲಿ 'ಲಯ' ಕ್ಕೆ ಎರಡು ಅರ್ಥ; ಪದ್ಯಕ್ಕೆ ಇರುವ ಛಂದೋ 'ಲಯ' ವೆಂಬುದು ಒಂದು ಅರ್ಥ;. ಸೃಷ್ಟಿ ಸ್ಥಿತಿ ಲಯ—ಎಂಬ ಭಾವನೆಯಲ್ಲಿ ಸಮಾವೇಶವಾಗುವ ಜಗತ್ತಿನ ಲಯ ಎಂಬುದು ಇನ್ನೊಂದು ಅರ್ಥ; 'ಲಯ' ಇಲ್ಲಿ ಇವೆರಡೂ ಅರ್ಥಗಳನ್ನು ಒಳಗೊಂಡಿರುವಂತೆ ಬಳಕೆಯಾದುದರಲ್ಲಿ ಸ್ವಾರಸ್ಯವಿದೆ ಆದರಂತೆ 'ಪದ'ಕ್ಕೂ ಎರಡು ಅರ್ಥ. 'ಹಾಡು' ಎಂಬ ಅರ್ಥ ಒಂದು; ಸಾವು ಪಡೆಯಬಹುದಾದ 'ನೆಲೆ' ಅಥವಾ 'ನಿಲವು' ಎಂಬ ಅರ್ಥ ಇನ್ನೊಂದು. ಇಲ್ಲಿ ವಿಶೇಷತಃ 'ಮುಕ್ತಿಪದ'ಎಂಬ ಅರ್ಥದಲ್ಲಿ ಅದು ಬಳಕೆಯಾಗಿದೆ.

# ಪದವ ಬ್ಯಾಗನೇ ಕಲಿ ಕಲಿ

ಪದವ ಬ್ಯಾಗನೇ ಕಲಿ ಕಲಿ| ಶಿವ|—
ಶರಣರ ಹೃದಯದ ಕೀಲಿ ||ಪಲ್ಲ||

೧

ಅಡಿಗಣ ಪ್ರಾಸಕೆ ದೊರಕದ ಪದವು
ನುಡಿಶಬ್ದಕೆ ನಿಜ ನಿಲುಕದ ಪದವು
ಕಡುಬಟ್ಟಿನ ಕೈ ತಾಳ ಮಾತ್ರೆಯ
ಬಡಿವಾರಕೆ ಬಯಲಾಗದ ಬ್ರಹ್ಮನ
ಪದವ........

೨

ಗಣ ನೇಮದ ಗುಣಗೆಡಿಸುವ ಪದವು
ತುಣುಕು ಶಾಸ್ತ್ರಕೆ ಮಣಿಯದ ಪದವು
ಗುಣಿಸಿಕೊಂಡು ಸಂಗೀತ ಸ್ವರಂಗಳ
ಎಣಿಸಿ ಎಣಿಸಿ ಕುಣಿಸ್ಯಾಡುವ ಕುಶಲ
ಪದವ........

೩

ಲಯ ಪ್ರಳಯಕೆ ಒಳಗಾಗದ ಪದವು
ನಿಲಿಯದೊಳು ನಿಜ ನಿಲಿಸುವ ಪದವು
ಒಲಿಸಿಕೊಂಡು ಶಿಶುನಾಳೇಶನು
ಸುಲಭದಿಂದ ಎನಗ್ಹೇಳಿದ ಪದವು
ಪದವ........

# ಪದವ ಬರೆದು ಕೊಟ್ಟೆ

ಶರೀಫರು ಪದ ರಚನೆಯ ಹದವನ್ನು ಚೆನ್ನಾಗಿ ಬಲ್ಲವರಾಗಿದ್ದರು. ಪದಕ್ಕೆ ಮೊದಲು ಸ್ಫೂರ್ತಿ ಬೇಕೆಂಬುದನ್ನೂ ಅವರು ಅರಿತವರಾಗಿದ್ದರು. ಆದುದರಿಂದಲೇ ಭಾವದ "ಕುದಿ ಉಕ್ಕಿ" ಬಂದಾಗಲೇ ಪದ ರೂಪುಗೊಳ್ಳು ವುದೆಂದು ಅವರ ಅಭಿಪ್ರಾಯ.

ಪದ ರಚನೆ, ಅಡಿಗಣ ಪ್ರಾಸ, ಗುರು, ಲಘುಗಳ ವಿನ್ಯಾಸ-ಇವುಗ ಳನ್ನು ಅವಲಂಬಿಸಿರುವದೆಂಬುದು ಅವರಿಗೆ ಚೆನ್ನಾಗಿ ಗೊತ್ತು. ಆದರೆ ಕೇವಲ ಹಾಡಿನ ಈ ಪರಿವಾರ ಮುಖ್ಯವಲ್ಲ. ಪದದಲ್ಲಿ ಹುದುಗಿದ ಸದಮಲ ಜ್ಞಾನ ಮುಖ್ಯ; ಬೋಧ ಮುಖ್ಯ....ಎಂಬುದು ಅವರ ಅಭಿಮತ. ಈ ಜ್ಞಾನ, ಈ ಬೋಧ ಭಾವಾವೇಶದೊಡನೆ ಹೊರಹೊಮ್ಮಿದಾಗ ತಾಳಲಯ, ಅಡಿ, ಗಣ, ಪ್ರಾಸ ತಾವಾಗಿಯೇ ಪದದಲ್ಲಿ ಹೊಂದಿಕೊಳ್ಳುವವು. ಚದುರ ರಾದವರಿಗೆ ಇದು ಹೃದಯದಲ್ಲಿ ಹೊಳೆಯದಿರದು.

ಪದದ ರಚನೆ ಎಷ್ಟು ಮಹತ್ವದ್ದೋ ಅಷ್ಟೇ ಪದವನು ಅರಿತು ಹಾಡು ವುದೂ ಮಹತ್ವದ್ದು. ಹಾಡುವವರಿಗೆ ಶರೀಫರು ಇಲ್ಲಿ ತಕ್ಕ ಎಚ್ಚರ ಕೊಟ್ಟಿದ್ದಾರೆ.

# ಪದವ ಬರೆದು ಕೊಟ್ಟೆ

ಪದವ ಬರೆದು ಕೊಟ್ಟೆ ನಿನಗ
ಅದನ್ನರಿತು ಹಾಡುವದು ನಿನ್ನೊಳಗ ||ಪಲ್ಲ||

ಸದಮಲ ಜ್ಞಾನದಿ ಕುದಿವುಕ್ಕಿ ಬರುವಾಗ
ಚದುರನಾದರೆ ತಿಳಿ ಹೃದಯಕಮಲದೊಳು||ಅನುಪಲ್ಲ||

೧

ಆಡಿಪ್ರಾಸ ಗುರುಲಘು ಶೂನ್ಯ| ಕಟ್ಟ—
ಕಡೆಯರೆಡಕ್ಷರ ಕನ್ಯಾ
ಸಡಗರ ತಾಳಲಯಂಗಳ ಕಡೆಗಿಟ್ಟು
ನುಡಿ ಶಬ್ದ ಗುರುನಿನ ಬಿಡದೆ ಭಜಿಸೆಂದು
ಪದವ ಬರೆದು............

೨

ಹಸನಾದ್ಯೆದಕ್ಷರ ಬಂದು | ಅದ—
ರಮೃತ ರಸವನು ಸವಿದು
ವಸುಧೆಯೊಳ್ ಶಿಶುನಾಳಾಧೀಶನ ಕರುಣದಿ
ಉಸುರಿದ ಈ ಮಾತು ಹುಸಿಯಲ್ಲ ನೋಡಿಕೋ
ಪದವ ಬರೆದು...........

# ಹಾವು ತುಳಿದೆನೇ

ತಮಗಾದ ಅನುಭಾವವನ್ನು ಸಲುಗೆಯ ಒಲುಮೆಯಿಂದ ಹೇಳುವುದು ಅನುಭಾವಿಗಳ ರೀತಿಗಳಲ್ಲಿ ಒಂದು. ಹೀಗೆ ಬೆಡಗು ಬಿನ್ನಾಣದ ಬಗೆಯಲ್ಲಿ ಅನುಭಾವಿ ಸಂಬೋಧಿಸುವ ಜೀವಿ ಆಗಾಗ ಮಾನಿನಿಯು, ಅಥವಾ ಪ್ರಿಯ ತಮೆಯು ರೂಪಕದಲ್ಲಿ ರೂಪತಾಳುವುದುಂಟು. ಈ ಬಗೆಯ ಸಂಬೋಧನೆ ಈ ಪದದಲ್ಲಿದೆ.

ಇಲ್ಲಿ ಹಾವು ಬಹುಶಃ ಸಂಸಾರದ ಸಂಕೇತವಾಗಿದೆ. ಮಾಯೆಯ ಛಾಯೆಯಾಗಿದೆ. ಈ ಸಾಂಕೇತಿಕ ಹಾವನ್ನು ಶ್ರೀ ಶರೀಫರು ತುಳಿದರೂ ಅದರ ಕೋರೆಯ ಹಲ್ಲು ಮುರಿದು ಮೆಟ್ಟಿ ನಿಂತ ನೋಟ ಈ ಪದದಲ್ಲಿ ಚಿತ್ರಿತವಾಗಿದೆ. ಮೊದಲು ಭಯದ ದನಿ ಹೊರಟಂತೆ ಭಾಸವಾದರೂ ಅದು ಭಯದ ದನಿಯಲ್ಲ, ನಿರ್ಭೀತಿಯ ಶ್ರುತಿಯೆಂಬುದು ಕೂಡಲೇ ತಿಳಿಯದಿರದು.

ಶರೀಫರ ಪದಗಳಲ್ಲಿ ಅಲ್ಲಲ್ಲಿ ಕೆಲವು ಊರುಗಳ ಹೆಸರಿನ ನಿರ್ದೇಶ ಬರುತ್ತದೆ ಇಲ್ಲಿ ಕಾರಡಗಿ ಗ್ರಾಮದ ನಿರ್ದೇಶ ಬಂದಿದೆ. ಬಹುಶಃ ಕಾರಡಗಿ ಗ್ರಾಮದಲ್ಲಿ, ನಡೆದ ಸಂಗತಿಯೊಂದು ಈ ಹಾಡಿನ ಹಿನ್ನೆಲೆಯಾಗಿರಬಹುದು.

ಈ ಪದ ಉತ್ಸಾಹ ಛಂದೋಲಯದಲ್ಲಿದೆ. ಅದರ ಗತಿ ಗತ್ತು ವಿಷಯಕ್ಕೆ ತುಂಬಾ ಹೊಂದಿಕೊಂಡಿವೆ.

# ಹಾವು ತುಳಿದೆನೇ

ಹಾವು ತುಳಿದೆನೇ| ಮಾನಿನಿ
ಹಾವು ತುಳಿದೆನೇ ||ಪಲ್ಲ||

೧

ಹಾವು ತುಳಿದು ಹಾರಿ ನಿಂತೆ;
ಜೀವ ಕಳವಳಿಸಿತು ಗೆಳತಿ
ದೇಹತ್ರಯದ ಸ್ಮೃತಿಯು ತಪ್ಪಿ
ದೇವಾ ನೀನೆ ಗತಿಯು ಎಂದು
ಹಾವು ತುಳಿದೆನೇ............

೨

ಹರಿಗೆ ಹಾಸಿಗೆಯಾದ ಹಾವು
ಹರನ ತೋಳಿನೊಳಿರುವ ಹಾವು
ಧರೆಯ ಹೊತ್ತು ಮೆರೆವ ಹಾವಿನ
ಶಿರವ ಮೆಟ್ಟಿ ಶಿವನ ದಯದಿ
ಹಾವು ತುಳಿದೆನೇ............

೩

ಬೋಧಾನಂದವಾಗಿ ಬರಲು
ದಾರಿಯೊಳಗೆ ಮಲಗಿ ಇರಲು
ಪಾದದಿಂದ ಪೊಡವಿಗೊತ್ತಿ
ನಾದಗೊಳಿಸಿತು ನಿಜದಿ ನೋಡಿ
ಹಾವು ತುಳಿದೆನೇ............

೪

ಕಾರಡಗಿ ಊರ ಹೊರಗೆ
ದಾರಿಕಟ್ಟೆ ತರುಬಿದಂಥ
ಘೋರತರದ ಉರಗ ಆದರ
ಕ್ವಾರಿ ಹಲ್ಲು ಮುರಿದ ತೆರದಿ
ಹಾವು ತುಳಿದೆನೇ............

೫

ಸತ್ಯ ಶಿಶುಸಾಳಧೀಶನ
ಉತ್ತಮ ಸೇವಕನಿಗೆ
ಕತ್ತಲೊಳು ಬಂದು ಕಾಲಿಗೆ
ಸುತ್ತಿಕೊಂಡಿತು ಸಣ್ಣ ನಾಗರ
ಹಾವು ತುಳಿದೆನೇ............

# ಸೋರುತಿಹುದು ಮನೆಯ ಮಾಳಿಗಿ

ಇಲ್ಲಿ ಮನೆ ಯಾವುದೊ?-ದೇಹವಾದರೂ ಇರಬೇಕು ಮನವಾದರೂ ಇರಬೇಕು; ಬಹುಶಃ ಮನವೇ ಇರಬೇಕೆಂದು ಕಾಣುತ್ತದೆ. ಹುಳುಕು ತೊಲೆ, ಮುರುಕ ಜಂತಿ-ಮೊದಲಾದುವೆಲ್ಲ ಇಂದ್ರಿಯಗಳಾಗಿರಬೇಕು. ಇಂದ್ರಿಯಗಳನ್ನು ಅಂಕೆಯೊಳಗಿಡುವುದು ಮನದ ಕೆಲಸ. ಹಾಗೆ ಇಟ್ಟಾಗಲೇ ಮನೆಯ ಮಾಳಿಗೆ ಭದ್ರವಾಗುತ್ತದೆ. ಇಡಿಯ ಪದ ಹೀಗೆ ಹೊರಗಿನ ಹಾಗು ಒಳಗಿನ ಅರ್ಥವನ್ನು ಒಳಗೊಂಡು ರೂಪಕದಲ್ಲಿ ರೂಪಗೊಂಡಿದೆ. ಕವಿಯ ರೂಪಕ ಶಕ್ತಿಗೆ ಇದು ಒಳ್ಳೆಯ ಉದಾಹರಣೆ. ಎಲ್ಲರ ಗಮನಕ್ಕೂ ಸಾಮಾನ್ಯವಾಗಿ ಬರುವ ಸಂಗತಿಯೊಂದನ್ನು ಅನುಭಾವದ ಬೆಳಕಿನಲ್ಲಿ ಎತ್ತಿ ತೋರುವ ಶಕ್ತಿ ಸಾಮಾನ್ಯವಾದುದಲ್ಲ.

ಹಾಡು ಉದ್ದಕ್ಕೂ ಲಯಬದ್ಧವಾಗಿ ಹರಿದಿದೆ. ಶ್ರೀ ಶರೀಫರ ಪದಗಳಲ್ಲಿ ಸಾಮಾನ್ಯವಾಗಿ ಸಮಾವೇಶವಾಗುವ ಆದಿ ಮತ್ತು ಅಂತ್ಯ ಪ್ರಾಸಗಳು ಇಲ್ಲಿ ನಿಯತವಾಗಿ ಬರದಿದ್ದರೂ ಈ ಪದದ ತುಂಬ ನಾದ ಸುಖದಲ್ಲಿ ಹರಿದಿದೆ.

'ಸೋರುತಿಹುದು ಮನೆಯ ಮಾಳಿಗಿ'-ಎಂದು ಚಿತ್ರಮಯವಾಗಿ ಪ್ರಾರಂಭವಾಗುವ ಈ ಹಾಡು ಚಿತ್ತವನ್ನು ಸೂರೆಗೊಳ್ಳದೆ ಇರದು.

# ಸೋರುತಿಹುದು ಮನೆಯ ಮಾಳಿಗಿ

ಸೋರುತಿಹುದು ಮನೆಯ ಮಾಳಿಗಿ | ಅಜ್ಞಾನದಿಂದ|
ಸೋರುತಿಹುದು ಮನೆಯ ಮಾಳಿಗಿ ||ಪಲ್ಲ||

೧

ಸೋರುತಿಹುದು ಮನೆಯ ಮಾಳಿಗಿ
ದಾರುಗಟ್ಟಿ ಮಾಳ್ಪರಿಲ್ಲ
ಕಾಳಕತ್ತಲೆಯೊಳಗೆ ನಾನು
ಮೇಲಕೇರಿ ಮೆಟ್ಟಲಾರೆ
ಸೋರುತಿಹುದು

೨

ಮುರ್ಕು ತೊಲೆಯು ಹುಳುಕ ಜಂತಿ
ಕೊರೆದು ಸರಿದು ಕೀಲ ಸಡಲಿ
ಹರಕ ಚಪ್ಪರ ಜೇರು ಗಿಂಡಿ
ಮೇಲಕೇರಿ ಮೆಟ್ಟಲಾರೆ
ಸೋರುತಿಹುದು

೩

ಕರಕಿ ಹುಲ್ಲು, ಕಸವು ಹತ್ತಿ
ದುರಿತ ಭವದಿ ಇರಬಿ ಮುತ್ತಿ
ಜಲದ ಭರದಿ ತಿಳಿಯ ಮಣ್ಣು
ಒಳಗೆ ಹೊರಗೆ ಏಕವಾಗಿ
ಸೋರುತಿಹುದು

೪

ಕಾಂತೆ ಕೇಳೆ ಕರುಣದಿಂದ
ಬಂತು ಕಾಣೆ ಹುಬ್ಬಿ ಮಳೆಯು
ಈಗ ಶಿಶುವಿನಾಳ ಗ್ರಾಮಕ
ಮೇಘರಾಜ ಒಲಿದು ಬಂದ
ಸೋರುತಿಹುದು

## ಅಳಬೇಡ ತಂಗಿ

ಸಾಮಾನ್ಯವಾಗಿ ಹೆಣ್ಣುಮಕ್ಕಳ ಜೀವನದಲ್ಲಿ ಒದಗುವ ಒಂದು ಭಾವನಾ ಪ್ರಧಾನವಾದ ಸನ್ನಿವೇಶ ಪದಕ್ಕೆ ಪ್ರೇರಣೆ ನೀಡಿದೆಯೆಂಬುದನ್ನು ಸಹಜವಾಗಿ ತಿಳಿದುಕೊಳ್ಳಬಹುದು. ಮದುವೆಯಾದ ಕನ್ನೆ ಮೊದಲ ಸಲ ಅತ್ತೆಯ ಮನೆಗೆ ಹೋಗುವ ಸನ್ನಿವೇಶ ಇಲ್ಲಿ ಒಂದು ಹೆಚ್ಚಿನ ಅರ್ಥವನ್ನೊಳಗೊಂಡು ಚಿತ್ರಿತವಾಗಿದೆ.

ಕವಿ ಹೇಳುವ ಸಮಾಧಾನದ ಮಾತು ಸಾವಧಾನವಾಗಿ ಹಾಡಿನಲ್ಲಿ ಹರಿದಿದೆ. ಲಯ ಅದಕ್ಕೆ ತುಂಬಾ ಹೊಂದಿಕೊಂಡು ಪದದ ದಾಟಿಗೆ ಒಂದು ಬೆಡಗನ್ನು ಉಂಟುಮಾಡಿದೆ. ಪದವು ಲಯಬದ್ಧವಾದಂತೆ ಪ್ರಾಸಬದ್ಧವೂ ಆಗಿದೆ.

ಇಲ್ಲಿ ಬಳಸಿದ ಶೈಲಿ ಸನ್ನಿವೇಶಕ್ಕೆ ತಕ್ಕಂತೆ ಸರಳವಾಗಿದೆ. ಕಡಕೀಲೆ, ದುಡಿಕೀಲೆ. ಮಿಡಿಕ್ಯಾಡಿ ಮೊದಲಾದ ಗ್ರಾಮ್ಯ ಪ್ರಯೋಗಗಳು ಸನ್ನಿವೇಶವನ್ನು ಸ್ವಾಭಾವಿಕವಾಗಿ ಚಿತ್ರಿಸಲು ನೆರವಾಗಿವೆ. ಅತ್ತೆಯ ಮನೆಗೆ ನಡೆದ ಕೇವಲ ತಂಗಿಗಲ್ಲ ಈ ಬೋಧೆ. ಅತ್ತ ಇತ್ತ ಹೊಯ್ದಾಡುವ ಜೀವಕ್ಕೆ ಇದು ನಿಜವಾದ ಬೋಧೆ.

"ಮಾಯದ ಮರವೇರಿದೆವ್ವಾ" ಎಂಬ ರೂಪಕ ಅಂದವಾಗಿದೆ. "ರಂಗೀಲೆ ಉಟ್ಟೆವ್ವಾ ರೇಸಿಮಿ ಸೀರಿ", ಹಂಗನೂಲಿನ ಪರವಿ ಬಟ್ಟೆಲ್ಲ ನಾರಿ"–ಇವೇ ಮೊದಲಾದ ಚರಣಗಳು ಸ್ಮರಣದಲ್ಲಿ ಅಚ್ಚೊತ್ತಿದಂತೆ ನಿಲ್ಲುತ್ತವೆ. ಇಂಥಲ್ಲಿ ಶರೀಫರ ನುಡಿಯ ಬೆಡಗನ್ನೂ ಶೈಲಿಯ ವೈಶಿಷ್ಟ್ಯವನ್ನೂ ಕಾಣುತ್ತೇವೆ.

# ಅಳಬೇಡ ತಂಗಿ

ಅಳಬೇಡ ತಂಗಿ ಅಳಬೇಡ
ನಿನ್ನ ಕಳುಹಬಂದವರಿಲ್ಲಿ ಉಳುಹಿಕೊಂಬುವರಿಲ್ಲ
ಅಳಬೇಡ ತಂಗಿ ಅಳಬೇಡ

೧

ಖಡಕೀಲೆ ಉಡಿಯಕ್ಕಿ ಹಾಕಿದರವ್ವಾ | ಒಳ್ಳೆ
ದುಡುಕೀಲೆ ಮುಂದಕೆ ನೂಕಿದರವ್ವಾ
ಮಿಡಿಕ್ಯಾಡಿ ಮದಿವ್ಯಾದಿ ಮೋಜುಕಾಣವ್ವ | ಮುಂದ
ಹುಡುಕ್ಯಾಡಿ ಮಾಯದ ಮರವೇರಿದೆವ್ವಾ
ಅಳಬೇಡ........

೨

ಮಿಂಡೇರ ಬಳಗವು ಬೆನ್ಹತ್ತಿ ಬಂದು | ನಿನ್ನ
ರಂಡೇರ್ಯೆವರು ಕೂಡಿ ನಗುತಲಿ ನಿಂತು
ಕಂಡವರ ಕಾಲ್ಬಿದ್ದು ಕೈಮುಗಿದು ನಿಂತರ
ಗಂಡನ ಮನಿ ನಿನಗ ಬಿಡದವ್ವ ತಂಗಿ
ಅಳಬೇಡ........

೩

ರಂಗೀಲಿ ಉಟ್ಟೇದಿ ರೇಸ್ಮಿದಡಿಸೀರಿ | ಮತ್ತ–
ಹಂಗನೂಲಿನ ಪರವಿ ಮರತೆವ್ವ ನಾರಿ
ಮಂಗಳ ಮೂರುತಿ ಶಿಶುನಾಳಾಧೀಶನ
ಅಂಗಳಕ ನೀ ಹೊರತಾದೆವ್ವ ಗೌರಿ
ಅಳಬೇಡ.......

# ಅಲ್ಲೀಕೇರಿಗೆ ಹೋಗುನು

ಶರೀಫರು ಬಲು ಮುದ್ದಾಗಿ ಬರೆದ ಪದಗಳಲ್ಲಿ ಇದು ಒಂದು. ಅಲ್ಲೀಕೇರಿಗೆ ಪಂತಿಯ ಊಟಕ್ಕೆ 'ಹೋಗುವ' ಸಂಪ್ರದಾಯವನ್ನು ಈ ಪದದಲ್ಲಿ ಒಂದು ಸುಂದರವಾದ ರೂಪಕಕ್ಕೆ ತಿರುಗಿಸಲಾಗಿದೆ. 'ಅಲ್ಲೀಕೇರಿ' ಎಂದರೆ ಸಾಕು; ನಾಲಿಗೆಗೆ ನೀರೂರುತ್ತದೆ. ಬಾಯಿಂದ ಪದ ಹೊರಡುತ್ತದೆ. ಮನಸು ಸೊಗಸಿನ ಹಂದರವನ್ನು ಹಾಕುತ್ತದೆ. ಆ ಹಂದರದಲ್ಲಿ ಪದಗಳ ಜೊತೆಗೆ ನುಡಿಯುವ ಕೋಲಿನಾಟ ಸಾಗುತ್ತದೆ. ಪದಕ್ಕೆ ವಿಷಯವನ್ನು ಆರಿಸಿಕೊಳ್ಳುವಲ್ಲಿ ಶರೀಫರು ಎತ್ತಿದ ಕೈ ಎಂಬುದನ್ನು ಈ ಹಾಡನ್ನು ಹಾಡಿ ಮನಗಾಣಬೇಕು. ಅಲ್ಲೀಕೇರಿಗೆ ಹೋಗುವುದೆಂದರೆ ಮನಸ್ಸು ಮಹತ್ತಿನತ್ತ ಸಾಗುವ ಹಾರೈಕೆ. "ಮೂರು ಗಿರಿಯ ಮರೆಯೊಳಿರುವ ನೀರು ತರುವ ಕೆರೆಯ ಬದಿಗೆ, ಪಾರುಗಾಣುವಂಥ ವಸ್ತು ಇದ್ರೆ ನೀಡ್ರೆ" ಎಂಬ ಚರಣಗಳು ಮಹತ್ತಿನತ್ತ ಸಾಗುವ ಮನದ ಹಾರೈಕೆಯನ್ನು ಸೂಚಿಸುತ್ತವೆ.

ಈ ಪದದ ದಾಟಿಯೇ ಮೊದಲು ಮುದ್ದಾಗಿದೆ; ಈ ಪದ ಅತ್ಯಂತ ಲೋಕಪ್ರಿಯವಾಗಲು ಈ ದಾಟಿಯೂ ಒಂದು ಕಾರಣ.

ಶರೀಫರು ಬಲು ರಸಿಕರು ಎಂಬುವದನ್ನು ಇಲ್ಲಿ ಕಂಡುಕೊಳ್ಳಬಹುದು; ರಸಿಕರನ್ನೇ ಅವರು ಅಲ್ಲಿಕೇರಿಗೆ ಕರೆಯುತ್ತಾರೆ. ಹಸನಾದ ಪದ ಹಾಡಲು ಕೇಳುತ್ತಾರೆ; ಅಂಥಿಂಥ ಹಾಡಲ್ಲ; ಅನುಭವದ ಪದ. ರಸಿಕರು ಹಾಡಿ ಪರಮಾನಂದವನ್ನು ಪಡೆಯಬಹುದಾದ ಪದ. ಅದನ್ನು ಹಾಡಿ ತಣಿಯಬೇಕು. ಇಲ್ಲವೆ ಕೇಳಿಯಾದರೂ ತಣಿಯಬೇಕು.

# ಅಲ್ಲೀಕೇರಿಗೆ ಹೋಗುನು

ಅಲ್ಲೀಕೇರಿಗೆ ಹೋಗುನು ಬರ್‍ತಿರೇನ್ರೇ| ನೀವು-
ಒಲ್ಲದಿದ್ದರೆ ಇಲ್ಲೆ ಇರತೀರೇನ್ರೇ ||ಪಲ್ಲ||
ಕಲ್ಲಾ ಮಲ್ಲಾ ಕೂಡಿಕೊಂಡು ದೀವಳಿಗೆಯ ಹಬ್ಬದಲ್ಲಿ
ಉಲ್ಲಾಸದಿಂದ ಅಲ್ಲಮಪ್ರಭುವಿನ ಮರತೀರೇನ್ರೇ
ಇಲ್ಲೆ ಇರತೀರೇನ್ರೇ || ಅನುಪಲ್ಲ||

೧

ಮಡಿಯನುಟ್ಟು ಮೀಸಲದಡಗಿ ಮಾಡಬೇಕ್ರೇ| ಅದಕೆ
ತಡವು ಆದರೆ ನಿಮ್ಮ ಗೊಡವಿ ನಮಗ ಯಾಕ್ರೇ
ಹುರಕ್ಕಿ ಹೋಳಿಗೆ ಹೂರಣಗಡಬು
ಕಡಲಿ ಪಚ್ಚಡಿ ಕಟ್ಟನಾಂಬ್ರಾ
ಚಟಗಿ ಮುಚ್ಚಳ ಬಾನದ ಗಡಿಗಿ ಹೆಡಿಗಿ ಜೋಕ್ರೇ| ನೀವು
ದೇವರ ಅಡಿಗೆ ವೃಢದಿ ಹೋಗಿ ಧೂಪ ಹಾಕ್ರೇ

೨

ಊರ ಹೊರಗಿನ ಸಾರಿ ಮೀರಿದ ಸ್ಥಳವನೋಡ್ರೇ| ಅದಕ
ಸೇರದಿದ್ದರ ನಿಮ್ಮ ಸ್ನೇಹ ನಮಗೆ ಬ್ಯಾಡ್ರೇ
ಮೂರು ಗಿರಿಯ ಮರೆಯಲ್ಲಿರುವ
ನೀರು ತರುವ ಕೆರೆಯ ಬದಿಗೆ
ಚಾರುತರದ ಬುರುಜಿನೊಳು ಬಾಜಾರ್ ಹೂಡ್ರೇ| ಮುಂದೆ
ಪಾರುಗಾಣಃವಂಥ ಸುಸ್ರಿ ತಂದು ಇಡ್ರೇ

೩

ವಸುಧೆಯೊಳು ಶಿಶುನಾಳಧೀಶನ ಹೆಸರ ಹೇಳ್ರೇ| ಹೇಸಿ
ವ್ಯಸನಿಕರಾದವರೆಲ್ಲ ಇದಕ ಬರಲೇ ಬ್ಯಾಡ್ರೇ
ಕುಶಲದಿಂದ ಕೋಲ ಪಿಡಿದು
ಹಸನಾಗಿ ಪದ ನುಡಿದು
ರಸಿಕರಾದವರೆಲ್ಲ ನೀವು ಕೂತು ಕೇಳ್ರೇ| ತುಸು
ಕಸರು ಇದ್ದರೆ ಇಲ್ಲಿ ಅದನು ತಿದ್ದಿ ಹೇಳ್ರೇ

## ದುಖಿಮೆ ಪಡಾ ಮನ

ಇದೊಂದು ಹಿಂದೀ ಪದ. ಶರೀಫರಿಂದ ರಚಿತವಾದುದೆಂಬುದನ್ನು 'ಶಿಶುನಾಳ ಜಗತಪರ'— ಎಂದು ಕೊನೆಯ ಪದ್ಯದಲ್ಲಿ ಬಂದ ಪದ ಪ್ರಯೋಗದಿಂದ ತಿಳಿದುಬರುತ್ತದೆ. ಕನ್ನಡಕ್ಕೆ ವಿಶಿಷ್ಟವಾಗಿರುವ ಆದಿ ಪ್ರಾಸವು ತಕ್ಕಮಟ್ಟಿಗೆ ಈ ಪದದಲ್ಲಿ ಕೂಡಿಕೊಂಡು ಬಂದಿದೆ.

ಪದದ ಶೈಲಿ ಸರಳವಾಗಿದ್ದಂತೆ ಪದದ ದಾಟಿ ಸರಳವಾಗಿದೆ; ಸುಂದರ ವಾಗಿದೆ.

## ದುಖವೆ ಪಡಾ ಮನ

ದುಖಮೆ ಪಡಾ ಮನ
ಸುಖ ನಹಿ ಮಾಯಾ
ಟಕತಿ ಮರನ ರಖವಾಲರೇ ||ಪಲ್ಲ||

೧

ಖಾತಾ ಸೀತಾ
ಸೋತಾ ಸಬದಿನ
ಬಾತ ಯೆ ಗಫಲತ ಖೇಲರೇ

೨

ತೀನ ರೋಜ ಗುಜ-
ರಾಸ ಜೀವನಕಾ
ಯೇ ತನ ಮಾತೀ ಮೈಲರೇ

೩

ರೋಶನ ಹೋ ಶಿಕು-
ನಾಳ ಜಗತಪರ
ದೇಶ ಪಿಯಾಕೆ ಲಾಲರೇ

# ತರವಲ್ಲ ತಗಿ ನಿನ್ನ ತಂಬೂರಿ

ಇಲ್ಲಿ ತಂಬೂರಿ, ಹಾಡಿನ ಹಿನ್ನೆಲೆಯಾಗಿ ನುಡಿದ ತಂತಿಯ ವಾದ್ಯ ಮಾತ್ರವಲ್ಲ. ಅದು ಒಂದು ಸಂಕೇತ. ಬಹುಶಃ ಅದು ಇಲ್ಲಿ ಜೀವಾತ್ಮದ ಸಂಕೇತವಾಗಿದೆ. ಹೀಗೆ ಸಂಕೇತವನ್ನು ಒಳಗೊಂಡು ಬರುವ ಪದಗಳು ಶ್ರೀ ಶರೀಫರ ಪದಗಳಲ್ಲಿ ಹಾಸುಹೊಕ್ಕಾಗಿವೆ. ಅನುಭವ ಪದದ ರೀತಿಯನ್ನು ಇಲ್ಲಿ ಕಾಣಬಹುದು.

ಶರೀಫರ ನಾದಸುಖವನ್ನು ಸೂಸುವ ಪದಗಳಲ್ಲಿ ಇದೂ ಒಂದು. ತಂಬೂರಿ ಎಂಬ ಶಬ್ದದಲ್ಲಿಯೇ ಒಂದು ನಾದವಿದೆ. ಆ ನಾದಸುಖವಾದ ಶಬ್ದ ಪುನಃ ಪುನಃ ಬಂದು ಪದಕ್ಕೆ ಒಂದು ಹೆಚ್ಚಿನ ಸೊಗಸನ್ನು ನೀಡುತ್ತದೆ, ತಂಬೂರಿಯ ತಂತಿಯನ್ನು ತಿದ್ದಿದಷ್ಟೂ ನಾದ ಮಧುರವಾಗುತ್ತದೆ.

ಮಂದಾನಿಲ ಛಂದೋಲಯವು ಈ ಪದದಲ್ಲಿ ಜೀಕಿ ಬಂದಿದೆ. ಈ ಪದದಲ್ಲಿ ಆದಿ ಪ್ರಾಸ ನಿಯತವಾಗಿದೆ. ಕಿವಿಗೆ ಎದ್ದು ಕೇಳುತ್ತದೆ. ಚರಣದ ಕೊನೆಯಲ್ಲಿ ಅಲ್ಲಲ್ಲಿ 'ಹುಸಿ' ಬಂದು ಹಾಡಿನ ಬೆಡಗನ್ನು ಹೆಚ್ಚಿಸಿದೆ.

ಎಲ್ಲವೂ ಹಸನಾಗಿರಬೇಕೆಂಬುದು ಶರೀಫರ ಮನೀಷೆ. ಆದುದರಿಂದ 'ಹಸನಾಗಿ' ಇರಬೇಕೆಂಬ ಮಾತು ಶರೀಫರ ಅನೇಕ ಪದ್ಯಗಳಲ್ಲಿ ತಲೆದೋರಿದೆ. ಅದರಂತೆ ಈ ಪದದಲ್ಲೂ ಅದು ತಲೆದೋರಿದೆ.

ತಂಬೂರಿಯನ್ನು ಬಾರಿಸಿದರೆ ಅದರಿಂದ ಮಧುರ ನಾದ ಹೊರಡಬೇಕು; ಪರಮಾನಂದವಾಗಬೇಕು. ಇಲ್ಲವಾದರೆ ತಂಬೂರಿಯನ್ನು ಬಾರಿಸುವ ಗೊಡವೆಗೆ ಹೋಗಬಾರದು ಎಂಬ ಎಚ್ಚರಿಕೆಯನ್ನು ಕೊಟ್ಟಿದ್ದಾರೆ.

## ತರವಲ್ಲ ತಗಿ ನಿನ್ನ ತಂಬೂರಿ

ತರವಲ್ಲ ತಗಿ ನಿನ್ನ ತಂಬೂರಿ
ಸ್ವರ ಬರದೆ ಬಾರಿಸದಿರು ತಂಬೂರಿ ||ಪಲ್ಲ||
ಸರಸಸಂಗೀತದ
ಕುರುಹುಗಳರಿಯದೆ
ಬರಿದೆ ಬಾರಿಸದಿರು ತಂಬೂರಿ ||ಅನುಪಲ್ಲ||

೧

ಮದ್ದಲಿ ದನಿಯೊಳು ತಂಬೂರಿ | ಅದ- |
ತಿದ್ದಿ ನುಡಿಸಬೇಕು ತಂಬೂರಿ
ಸಿದ್ಧ ಸಾದಕರ ಸು-
ವಿದ್ಯೆಗೆ ಒದಗುವ
ಬುದ್ಧಿವಂತಗೆ ತಕ್ಕ ತಂಬೂರಿ

೨

ಬಾಳ ಬಲ್ಲವರಿಗೆ ತಂಬೂರಿ | ದೇವ- |
ಬಾಳಾಕ್ಷ ರಚಿಸಿದ ತಂಬೂರಿ
ಹೇಳಲಿ ಏನಿದರ
ಹಂಚಿಕೆ ಅರಿಯದ
ತಾಳಗೇಡಿಗೆ ಸಲ್ಲ ತಂಬೂರಿ

೩

ಸತ್ಯ ಶರಧಿಯೊಳು ತಂಬೂರಿ | ನಿತ್ಯ |
ಉತ್ತಮರಾಡುವ ತಂಬೂರಿ
ಬತ್ತೀಸರಾಗದಿ
ಬಗೆಯನರಿಯದಂಥ
ಕತ್ತೀಗಿನ್ಯಾತಕೆ ತಂಬೂರಿ

೪

ಅಸಮ ಸುಮ್ಯಾಳಕೆ ತಂಬೂರಿ | ಇದು |
ಕುಶಲರಿಗೊಪ್ಪುವ ತಂಬೂರಿ
ಶಿಶುನಾಳಧೀಶನ
ಓದು ಪುರಾಣದಿ
ಹಸನಾಗಿ ಬಾರಿಸೊ ತಂಬೂರಿ

# ಕೋಡಗನ ಕೋಳಿ ನುಂಗಿತು

ಇದು ಒಂದು ಬೆಡಗಿನ ಹಾಡು, ಬೆರಗನ್ನುಂಟು ಮಾಡುವ ಹಾಡು; 'ಕೋಡಗನ ಕೋಳಿ ನುಂಗಿತು' ಎಂದು ಆರಂಭವಾಗುತ್ತದೆ. ಕೋಡಗನನ್ನು ಕೋಳಿ ನುಂಗುವದೆಂತು ? ಇದರಲ್ಲಿ ಏನೋ ಒಂದು ಗೂಢವಿರಬೇಕೆಂದು ಅನಿಸುತ್ತದೆ. ಇದೇ ಬೆರಗು 'ಆಡು ಆನೆಯ ನುಂಗಿತು' ಎಂದು ಮುಂದುವರಿದು ಕ್ರಮವಾಗಿ ಬೆರಗಿನ ಒಂದು ಮಾಲೆಯೇ ಆಗುತ್ತದೆ. ಈ ಮೋಜನ್ನು ಪದ ಹಾಡಿಯೇ ನೋಡಬೇಕು. ಕೊನೆಯಲ್ಲಿ 'ಅಂಗವನ್ನು ಆತ್ಮ ನುಂಗಿತು' ಎಂಬ ಚರಣದಲ್ಲಿ ಈ ಪದದ ತಿರುಳು ಅರಳಿದೆ.

ಈ ಪದದ ದಾಟಿಯಲ್ಲಿ ಓಟ ಇದೆ. ಈ ಓಟ ವಿಷಯಕ್ಕೆ ಅನುಕೂಲವಾಗಿದೆ. ಪ್ರಾಸ ಸಹಜವಾಗಿ ಸೂಸಿ ಬಂದಿದೆ. ಆದಿಪ್ರಾಸ ಅಷ್ಟು ನಿಯತವಾಗಿಲ್ಲ. ಆದರೆ ಅನುಪ್ರಾಸದಿಂದ ಈ ಹಾಡಿಗೆ ಒಂದು ಹೆಚ್ಚಿನ ಅಂದ ಒದಗಿದೆ.

ಬೆರಗಿನೊಡನೆ ಈ ಹಾಡು ನಮ್ಮ ಮುಖದಲ್ಲಿ ಮೆಲು ನಗೆಯನ್ನೂ ಮೂಡಿಸದಿರದು. ಅಂತೂ ಇಲ್ಲಿ ಶರೀಫರು ಬೆರಗಿನ ಒಂದು ಬಲೆಯನ್ನೇ ನೆಯ್ದಿದ್ದಾರೆ. ಹಾಡಿನ ಉದ್ದಕ್ಕೂ ಹಾಸ್ಯ ಸುಳಿದು ಬಂದಿದೆ. 'ಕುಟ್ಟಲು ಬಂದ ಮುದಕೀಯ ನೊಣವು ನುಂಗಿತ್ತ' ಎಂದಾಗ ನಗದೆ ಇರುವುದು ಹೇಗೆ?

ಶರೀಫರ ಗುರುವಿನ ಹೆಸರು ಹಾಡಿನ ಕೊನೆಯಲ್ಲಿ ಬಂದಿದೆ. ಆದರೆ ಶಿಶುನಾಳಧೀಶ ಎಂಬ ಅಂಕಿತ ಅದೇಕೋ ಇಲ್ಲಿ ಬಂದಿಲ್ಲ.

# ಕೋಡಗನ ಕೋಳಿ ನುಂಗಿತು

ಕೋಡಗನ ಕೋಳಿ ನುಂಗಿತ
ನೋಡವ್ವಾ ತಂಗಿ ||ಪಲ್ಲ||

೧

ಆಡು ಆನೆಯ ನುಂಗಿ
ಗೋಡೆ ಸುಣ್ಣವ ನುಂಗಿ
ಆಡಲು ಬಂದ ಪಾತರದವಳ ಮದ್ದಿ ನುಂಗಿತ

೨

ಒಳ್ಳು ಒನಕಿಯ ನುಂಗಿ
ಬೀಸುಕಲ್ಲು ಗೂಟವ ನುಂಗಿ
ಕುಟ್ಟಲಿಕೆ ಬಂದ ಮುದಕಿಯ ನೊಣವು ನುಂಗಿತ

೩

ಹಗ್ಗ ಮಗ್ಗವ ನುಂಗಿ
ಮಗ್ಗವ ಲಾಳಿ ನುಂಗಿ
ಮಗ್ಗದಾಗಿರುವ ಅಣ್ಣನ ಕುಣಿಯು ನುಂಗಿತ

ಎತ್ತು ಜತ್ತಗಿ ನುಂಗಿ
ಭತ್ತ ಬಾನವ ನುಂಗಿ
ಮುಕ್ಕಟ ತಿರುವೊ ಅಣ್ಣನ ಮೇಳಿ ನುಂಗಿತ

೫

ಗುಡ್ಡ ಗಂವ್ಹರ ನುಂಗಿ
ಗಂವ್ಹರ ಇರಿವೆ ನುಂಗಿ
ಗುರುಗೋವಿಂದನ ಪಾದ ಆತ್ಮ ನುಂಗಿತ

# ತೂಗುತಿದೆ ನಿಜ ಬೈಲಲಿ

ಇಲ್ಲಿ ತೂಗುವುದು ಕೇವಲ ಲೋಕದ ಜೋಕಾಲಿಯಲ್ಲ; ಪೊಡವಿ ಆಕಾಶ ಏಕವಾಗಿ ತೂಗುವ ಜೋಕಾಲಿ. ಬಲ್ಲವರೇ ಬಲ್ಲರು ಈ ಉಯ್ಯಾಲೆಯ ಲಯವನ್ನು. ಮೊದಲಿನಿಂದ ಕೊನೆಯವರೆಗೆ ಪರಬ್ರಹ್ಮಪರವಾದ ರೂಪಕವು ಇಲ್ಲಿ ಉಯ್ಯಾಲೆಯಾಡಿದೆ.

ಈ ಪದದ ಭಾವ ವಿಸ್ತಾರಕ್ಕೆ ಮೇರೆಯಿಲ್ಲ. ಪೊಡವಿ ಆಕಾಶ ಏಕವಾಗಿ ತೂಗುವ ಜೋಕಾಲಿಯ ಜೀಕಿಗೆ ಮೇರೆ ಎಂಬುದು ತಾನೆ ಹೇಗೆ? ಈ ಭಾವದ ಹರಹಿಗೆ ಸರಿಯಾಗಿ ಇಲ್ಲಿಯ ನಾದಲಯ ಹರಡಿದೆ ದೀರ್ಘ ಸ್ವರಮೇಳದಿಂದ ಕೂಡಿದ ಈ ಪದದ ತಾಳಲಯ, ನಮ್ಮ ಚಿತ್ತವನ್ನು ದೂರ ಬಹು ದೂರ ತೂಗಿ ಅನಂತದಲ್ಲಿ ತೇಲಿಸುವಂತೆ ಭಾಸವಾಗುತ್ತದೆ.

ಇಲ್ಲಿಯ ಭಾಷೆಯೂ ಭಾವಲೋಕದ ಎತ್ತರಕ್ಕೆ ಏರಿದೆ. "ಅಂಬರದೊಳವತಾರ ತುಂಬಿ ತುಳುಕುವಂತೆ" "ಪೊಡವಿ ಆಕಾಶ ಬೆರೆದೇಕವಾಗಿ" 'ತಿಳಿ ನೀರ ತೊಟ್ಟಿಲಲ್ಲಿ........ಹೊಳೆವ ಕೈವಲ್ಯ- ಜೋಕಾಲಿ'—ಇವೇ ಮೊದಲಾದ ಪ್ರಯೋಗಗಳನ್ನು ಗಮನಿಸಬೇಕು.

# ತೂಗುತಿದೆ ನಿಜ ಬೈಲಲಿ

ತೂಗುತಿದೆ ನಿಜ ಬೈಲಲಿ
ಜೋಕಾಲಿ-ಜೋಲಿ-ಲಾಲಿ ‖ ಪಲ್ಲ ‖

೧

ಸಾಂಬ ಲೋಕದ ಮಧ್ಯದಿ | ಸವಿಗೊಂಡು
ಕಂಬು ಸೂತ್ರದ ಸಾಧ್ಯದಿ
ಅಂಬರದೊಳವತಾರ ತುಂಬಿ ತುಳಕುವಂತೆ
ಸಾಂಬ ಸಾಕ್ಷಾತ್ತ ಜೋಕಾಲಿ ಜೋಲಿ
ಜೋ-ಲಾಲಿ

೨

ಪೊಡವಿಗಡಗಿರ್ದ ಜ್ಯೋತಿ | ಮೃಡನಿರ್ದು
ತಾನಾಗಿ ಬಿಳಿಯ ಬತ್ತಿ
ಪೊಡವಿ ಆಕಾಶ ತಾನೇಕವಾಗಿ |
ಒಡೆಯ ಕರ್ತೃಕನ ಜೋಕಾಲಿ ಜೋಲಿ
ಜೋಲಿ-ಲಾಲಿ

೩

ಹೊಳೆವ ಮಹಾ ಬೆಳಕಿನಲ್ಲಿ | ಕಳೆಯುಳ್ಳ
ತಿಳಿ ನೀರ ತೊಟ್ಟಲಲ್ಲಿ
ಇಳೆಯೊಳು ಶಿಶುನಾಳಧೀಶನ ಮನದೊಳು
ಹೊಳೆವ ಕೈವಲ್ಯ ಜೋಕಾಲಿ ಜೋಲಿ
ಜೋಲಿ-ಲಾಲಿ

# ಬಿದ್ದಿಯಬೇ ಮುದಕೀ

ಜೀವವನ್ನು ಸಂಬೋಧಿಸಿ ಹಾಡಿದ ಪದವಿದು. ಇಲ್ಲಿ ಜೀವವೇ ಮುದಿಕೆ. ಜೀವ ಯುಗಯುಗಗಳಲ್ಲಿ ಹಾದು ಬಂದಿದೆ; ಹಳೆಯದಾಗಿದೆ. ಆದುದರಿಂದಲೇ ಅದನ್ನು ಮುದಿಕೆಗೆ ಹೋಲಿಸಲಾಗಿದೆ.

ಹುಲಗೂರ ಸಂತೆಯಲ್ಲಿ ಕವಿ ಕಂಡನೋಟ ಈ ಪದಕ್ಕೆ ವಿಷಯವನ್ನು ಒದಗಿಸಿರಬೇಕೆಂದು ತಿಳಿಯಲು ಪದದಲ್ಲಿಯೇ ಆಧಾರವಿದೆ. ಆ ನೋಟ ವನ್ನು ಶರೀಫರು ಇಲ್ಲಿ ಮೋಜಿನಿಂದ ರೂಪಕಕ್ಕೆ ತಿರುಗಿಸಿದ್ದಾರೆ.

ಶರೀಫರ ಚಿತ್ರ ಶೈಲಿಗೆ ಈ ಪದ ಉದಾಹರಣೆಯಾಗಿದೆ. ಎರಡನೆಯ ಮತ್ತು ಮೂರನೆಯ ಪದ್ಯಗಳು ಶಬ್ದ-ಚಿತ್ರಗಳಾಗಿವೆ.

ಜನಪದದ ನಿಚ್ಚಳವಾದ ನುಡಿಯ ಬೆಡಗನ್ನು ಇಲ್ಲಿ ಕಾಣಬಹುದು. ಈ ನುಡಿಯ ಬೆಡಗಿಗೆ ಪದ್ಯದ ಪ್ರಾಸ ತನ್ನದೇ ಆದ ಕಾಣಿಕೆಯನ್ನು ನೀಡಿದೆ. ಹಾಡಿನ ದಾಟಿಯಲ್ಲಿ ಒಂದು ಮೋಡಿ ಇದೇ. ಇನ್ನೇನು ಬೇಕು ?

# ಬಿದ್ದಿಯಬೇ ಮುದಕಿ

ಬಿದ್ದಿಯಬೇ ಮುದಕಿ
ನೀ ದಿನ ಹೋದಾಕಿ, ಬಲು ಜೋಕಿ
ಬಿದ್ದಿಯಬೇ ಮುದುಕಿ ||ಪಲ್ಲ||

೧

ಸದ್ಯಕಿದು ಹುಲಗುರ ಸಂತಿ
ಗದ್ದಲದೊಳಗ ಯಾಕ ನಿಂತಿ
ಬಿದ್ದು ಒದ್ದಾಡಿದರ ಎಬಿಸುವರಿಲ್ಲಾ
ಬುದ್ದಿಗೇಡಿ ಮುದುಕಿ ನೀನು
ಬಿದ್ದಿಯಬೇ ಮುದುಕಿ

೨

ಬುಟ್ಟಿಯೊಳು ಪಟ್ಟೆವನಿಟ್ಟ
ಉಟ್ಟರದನ ಚೀಲ ಜೋಕಿ
ಕೆಟ್ಟ ಗಂಟಿ ಚೌಡೆರ ಬಂದು
ಕತ್ತರಿಸಿಕೊಂಡು ಹೋದಾರ ಮುದಕೀ
ಬಿದ್ದಿಯಬೇ ಮುದಕಿ

೩

ಶಿಶುವಿನಾಳಧೀಶನ ಮುಂದೆ
ಕೊಸರಿ ಕೊಸರಿ ಹೋಗದಿರು
ಹಸನವಿಲ್ಲ ಹರೆಯವು ಮೀರಿದ
ಪಿಸುರು ಪಿಚ್ಚುಗಣ್ಣಿನ ಮುದುಕೀ
ಬಿದ್ದಿಯಬೇ ಮುದುಕೀ

# ಹೋಗುತಿಹುದು ಕಾಯ ವ್ಯರ್ಥ

ಜೀವನವೊಂದು ನಿರಂತರ ಹೋರಾಟ; ಕಾಳಗ ಭೂಮಿ. ಬೆಳಗಿನಿಂದ ಬೈಗಿನ ವರೆಗೆ ಹೊಟ್ಟೆಯ ಹೋರಾಟದಲ್ಲಿಯೇ ಮನುಷ್ಯನ ದೇಹ ಸವೆದು ಹಣ್ಣಾಗುತ್ತದೆ. ತನ್ನ ಹುಟ್ಟು ತನ್ನ ನೆಲೆಬೆಲೆಗಳನ್ನು ಘನತೆ ಗೌರವ ಗಳನ್ನು, ಅರಿಯದೆ ವ್ಯರ್ಥವಾಗಿ ಹಣ್ಣಾಗುವ ಮನುಷ್ಯನ ಬಾಳನ್ನು ಕಂಡ ಕವಿ ಮನಕರಗಿ ಹೀಗೆ ನುಡಿಯುತ್ತಾನೆ. ಬದುಕಿನ ಸುಳಿಯಲ್ಲಿ ಸಿಕ್ಕು ಸಾಯುವ ವ್ಯಕ್ತಿಗೆ ತಾನು ಉದಿಸಿದ ಎಲ್ಲೆ, ಸೇರಬೇಕಾದ ತಾಣಗಳ ಅರಿವು ಇಲ್ಲ. ಭೋಗಲಂಪಟದಲ್ಲಿ ಮೈಮರೆತು ತನ್ನನ್ನು ತಾನು ಅರಿಯದ ಅರುಹುಗೇಡಿಗೆ ಶರೀಫರು ಮಾರ್ಗ ತೋರುತ್ತಾರೆ. ವಿಷಯ ಸುಖವು ಮರ ಣಕ್ಕೆ ಮಾರ್ಗವೆಂಬುದನ್ನು ತಿಳಿಸಿ ಬದುಕು ಹಸನಾಗುವದಕ್ಕೆ, ಹಗುರಾಗು ವದಕ್ಕೆ ಹಾದಿ ತೋರುತ್ತಾರೆ. ಸಾಮಾನ್ಯ ಬದುಕಿನಾಚೆಗೂ ಒಂದು ಬದು ಕುಂಟು. ಅದರೆಡೆಗೆ ಕೈ 'ಚಾಚು' ಎಂದು ಹೇಳುವ ಈ ಕವನ ಹೃದಯ ಸ್ಪರ್ಶಿಯಾಗಿದೆ. ತನ್ನ ನೆಲೆ ಬೆಲೆಗಳನ್ನು ಮರೆತ ಮಾನವನ ವಿಷಯದಲ್ಲಿ ಕವಿಗೆ ಮರುಕವಿದೆ, ಕನಿಕರವಿದೆ.'ಸದ್ಯ ನದರಿಟ್ಟು ನೋಡಿಕೋ ಉದಿಸಿದ್ಯಾ ವಲ್ಲೆ' ಎಂದು ನಮ್ಮನ್ನು ಕವಿ ಎಚ್ಚರಗೊಳಿಸುತ್ತಾರೆ.

# ಹೋಗುತಿಹುದು ಕಾಯವ್ಯರ್ಥ

ಹೋಗುತಿಹುದು ಕಾಯ ವ್ಯರ್ಥ | ಇದರ
ಲಾಗವ ತಿಳಿದವ ಯೋಗಿ ಸಮರ್ಥ ||ಪಲ್ಲ||

೧

ಏಳು ಜನ್ಮಾಂತರ ದಿನವು | ಹೀಂಗ
ಹೇಳದೆ ಹೋದವು ನಿನಗಿಲ್ಲೊ ನೆನಹು
ಭೋಗ ಲಂಪಟ ಸುಖ ಘನವು | ಭವ
ರೋಗದಿ ಮರಣಕ್ಕೆ ಆಯಿತೊ ಅಸುವು

೨

ಬದುಕೇನು ಮಾಡಿದಿ ಇಲ್ಲೆ | ಸುಳ್ಳೆ
ಮುದಿಕ್ಯಾಗಿ ಮೆರದೆಲ್ಲ ಛೀ ಹುಚ್ಚಿ ಮರುಳೆ
ಅದಕೆ ಕೇಳುವ ಯಮನಲ್ಲೆ! ಸದ್ಯ
ನೆದರಿಟ್ಟು ನೋಡಿಕೋ ಉದಿಸಿದ್ಯಾವಲ್ಲೆ

೩

ಇನ್ನಾರ ತಿಳಿ ಕಂಡ್ಯಾ ತಮ್ಮಾ | ನುಡಿ
ಓಂನಮಃಶಿವಯೆಂಬೊ ಮಂತ್ರವು |ನಿಮ್ಮಾ
ಪುಣ್ಯ ಪಾದಗಳನ್ನ ಕರ್ಮಾ |
ಕಳಿದುಳಿದದ್ದೆ ಶಿಶುನಾಳಧೀಶನ ಧರ್ಮಾ

# ಶೀಗಿ ಹುಣ್ಣಿಮೆ ದಿನ

ನಾಡಿನ ಒಕ್ಕಲು ಜನ ಶೀಗಿ ಹುಣ್ಣಿಮೆಯ ದಿನ ಹೊಲದಲ್ಲಿ 'ಚರಗ' ಚಲ್ಲಲು ಹೋಗುತ್ತಾರಷ್ಟೆ ? ಸಿಹಿಯಾದ ತಿಂಡಿಯನ್ನು ಸುಣ್ಣ ಬಣ್ಣಗಳಿಂದ ಅಲಂಕರಿಸಿದ ಬುಟ್ಟಿಯಲ್ಲಿ ಇಟ್ಟುಕೊಂಡು ಒಕ್ಕಲಿಗರು ಹೊಲಗಳಿಗೆ ಹೋಗುತ್ತಾರೆ. ಕಾಡು ಕಲ್ಲಿಗೆ ಸುಣ್ಣ ಬಣ್ಣ ಬಳಿದು 'ಹಂಗನೂಲು ಹಾಕಿ ಗಂಥದ ಬೊಟ್ಟನ್ನು ಗಮಕಿಲೆ ಇಟ್ಟು' ಅನ್ನವನ್ನು ಹೊಲದ ತುಂಬೆಲ್ಲ ಸೂರೆ ಮಾಡುವ ಜನ "ಮನದ ಮೈಲಿಗೆಯನ್ನುತೊಳೆಯಲಿಲ್ಲವಲ್ಲಾ"! ಎಂದು ಕವಿಹೃದಯ ಮರುಗುತ್ತದೆ. ನಮ್ಮ ಅನ್ನವು ಪ್ರಕೃತಿಯ ಕೊಡುಗೆ. ಪ್ರಕೃತಿಯ ಕೊಡುಗೆಯನ್ನು ಅವಳಿಗೆ ಮೊದಲಲ್ಲಿ ಅರ್ಪಿಸಿ, ಅನಂತರ ತಾವು ಸಂತೋಷದಿಂದ ಸ್ವೀಕರಿಸಿ ಉಣ್ಣುವ ಕಾಲದಲ್ಲಿ ಮನುಷ್ಯ ತನ್ನನ್ನು ತಾನು ಮರೆಯುತ್ತಿರುವನಲ್ಲಾ ಎಂಬ ಭಾವ ವ್ಯಕ್ತವಾಗಿದೆ. ಭಾವ ಇಲ್ಲಿ ಭಾಷೆಗೆ ಬಣ್ಣ ಬಳೆದಿದೆ. ಒಕ್ಕಲು ಮಕ್ಕಳ ಜೀವನದ ಆ ಸಂತಸ ಆ ಸಡಗರ ಕಣ್ಣು ಕಟ್ಟುತ್ತದೆ. ಮನುಷ್ಯ ತಾನು ಕೈಕೊಳ್ಳುವ ಕಾರ್ಯದ ಅಂತರಾರ್ಥ ಅರಿಯದೆ ಮುಂದುವರಿಯುವನಲ್ಲಾ ಎಂಬ ಭಾವವು. 'ಮನಸಿನ ಮೈಲಿಗೆ ತೊಳಿಲಿಲ್ಲಾ' ಎಂಬ ಚರಣದಿಂದ ವ್ಯಕ್ತವಾಗುತ್ತದೆ ಲೌಕಿಕದಿಂದ ಪಾರಮಾರ್ಥಿಕದೆಡೆಗೆ ಕೊಂಡೊಯ್ಯುತ್ತಾನೆ ಕವಿ ಪದ ಕೇಳುವವರನ್ನು.

"ಗಂಥದ ಬೊಟ್ಟು ಗಮಕಿಲೆ ಇಟ್ಟು" ಎಂಬಲ್ಲಿ ಕವಿಯ ನುಡಿಯ ಬೆಡಗು ಪಡಮೂಡಿದೆ. ಶರೀಫರ ರಸಿಕತನಕ್ಕೆ ಇಡಿಯ ಪದವೇ ಕನ್ನಡಿಯಾಗಿದೆ.

# ಶೀಗಿ ಹುಣ್ಣಿವೆ ದಿನ

ಶೀಗಿ ಹುಣ್ಣಿವೆ ದಿನ ಉಣ್ಣಲಿಕ್ಕೆ ಕರೆಯುವರೆಲ್ಲಾ
ಕರೆದರೆ ಹೋಗದೆ ಬಿಡಲಿಲ್ಲಾ | ಪಲ್ಲ |

೧

ಹುರಿಯಕ್ಕಿ ಹೋಳಿಗಿ ಹೂರಣಗಡಬು
ಕಡಲೀ ಪಚ್ಚಡಿ ಕಟ್ಟಿನಾಂಬರಾ
ಉಂಡಿಗಡಬು ಪುಂಡಿಯಪಲ್ಲೆ
ಬುಟ್ಟಿಯೊಳಿಟ್ಟಿಲ್ಲಾ |
ಕೆವ್ಮಣ್ಣು ಬುಟ್ಟಿಗೆ ಬಡದೆಲ್ಲಾ
ಅದರನುಭವ ತಿಳಿಲಿಲ್ಲಾ

೨

ಅಂದು ಇಂದು ಬಂದು ಬಹುದಿನ
ಹೊಲದೊಳು ಕುಂತೆಲ್ಲಾ
ಮನಸಿನ ಮ್ಯೆಲಿಗೆ ತೊಳಿಲಿಲ್ಲಾ
ಗಂಧದ ಬೊಟ್ಟು ಗಮಕಿಲೆ ಇಟ್ಟು
ಹಂಗನೂಲು ಹಾಕಿಯೆಷ್ಟು
ಬಟ್ಟನ್ನ ಕಲ್ಲಿಗೆ ಸುಣ್ಣಾ ತೊಟ್ಟು
ಕಣ್ಣಿಗೆ ಕಂಡೆಲ್ಲಾ
ಆ ಕಲ್ಲೇನೂ ಉಣಲಿಲ್ಲಾ
ಎಡೆ ಮಾಡಿ ನೀನೇ ಉಂಡೆಲ್ಲಾ

೩

ಮಂಗಳಾತ್ಮ ಶಿಶುನಾಳಧೀಶನಲ್ಲೆ
ಬಲ್ಲವರು ಕೂಡಿರಲ್ಲೆ
ಶೃಂಗಾರವಾದ ನಾರೇರೆಲ್ಲಾ
ರಂಗಿನಿಂದ ಕೋಲಸಿಡಿದು
ಯೋಗದಿಂದ ತ್ಯಾಗಮಾಡಿ
ರಾಗದಲ್ಲೆ ಶಿವಶರಣರಲ್ಲೆ
ಶೀಗಿಗೆ ಕರದಾರಲ್ಲೆ

# ಪಾರಿವಾಳದ ಆಟ ಛಂದಾ

ಇಲ್ಲಿ ಬಂದ ಪಾರಿವಾಳದ ಆಟದ ನೋಟ ಬಲು ಅಂದವಾಗಿದೆ. ಶರೀಫರ ಸೌಂದರ್ಯ ನಿರೀಕ್ಷಣೆಗೆ ಈ ಪದ ನಿದರ್ಶನವಾಗಿದೆ. ಅವರ ಚಿತ್ರ ಶೈಲಿಯನ್ನು ಈ ಹಾಡು ಎತ್ತಿ ತೋರುತ್ತದೆ.

ಹಾರುವ ಪಾರಿವಾಳದ ಆಟವನ್ನು ವರ್ಣಿಸುವ ಈ ಪದ್ಯಗಳು ಬಾಲಕರ ಮನವನ್ನು ಸಂಮುಗ್ಧ ಗೊಳಿಸುವಂತಿವೆ.ಶರೀಫರು ತಾವಾಗಿಯೇ ಕೊನೆಯಲ್ಲಿ ಹೇಳಿದಂತೆ ಇದು ರಸಿಕರ ಹಾಡು. :ಯೋಗರಸಿಕರೂ ಇದನ್ನು ಹಾಡಿ ನಲಿಯಬಹುದು. ಮುಗಿಲಲ್ಲಿ ತೇಲುತ್ತ ಲಾಗ ಹೊಡೆಯುವ ಪಾರಿ ವಾಳದ ಏರಿಳಿತವನ್ನು ಈ ಪದದ ಛಂದೋಲಯವು ಸೂಚಿಸುವಂತಿದೆ. ಶರೀಫರೇ ಹೇಳಿದಂತೆ ಇದು ಹಸನಾದ ಹೊಸ ಪಕ್ಷಿ ರಾಗ.

ಈ ಪಾರಿವಾಳದ ಆಟದಲ್ಲಿ ಶರೀಫರು ಆಧ್ಯಾತ್ಮದ ಒಂದು ತತ್ವ ವನ್ನು ಕಂಡಂತಿದೆ.

ಒಟ್ಟಿನಲ್ಲಿ ಪಾರಿವಾಳದ ಆಟದಂತೆ ಈ ಪದ ಅಂದವಾಗಿದೆ. ಸರಳ ಶೈಲಿಯಲ್ಲಿ ಬರೆದ ಈ ಹಾಡು ಸರಸವಾಗಿದೆ.

# ಪಾರಿವಾಳದ ಆಟ ಛಂದ

ಪಾರಿವಾಳದ ಆಟ ಛಂದಾ| ಅದು
ಹಾರುತ ಬಂದರೆ ಮನಸಿಗಾನಂದ ||ಪಲ್ಲ||

೧

ಹಿಂದಿನ ರೆಕ್ಕೆಯ ಕಿತ್ತು| ಮುಂದೆ
ಬರುವಂಥ ಪುಚ್ಛದ ಗರಿಗಳ್ಯಾವತ್ತು
ಸಂಧಿ ಸಂಧಿಗೆ ಶುಭವಿತ್ತು| ಅದು
ಕಂದಿ ಕುಂದದಾಂಗ ಸಲುಹಲು ಗೊತ್ತು
ಪಾರಿವಾಳದ ಆಟ ಛಂದಾ

೨

ಮ್ಯಾಲಕ್ಕ ಹೊಡಿ ಮೂರು ಲಾಗಾ| ಸಾಲು
ತೇಲುವ ಡವಲು ಫಲ ದೈವ ಭೋಗಾ
ಶಿಶುನಾಳಧೀಶನ ಯೋಗಾ| ರಸಿಕರ
ಹಾಡಿದು ಹಸನಾದ ಹೊಸ ಪಕ್ಷಿರಾಗಾ
ಪಾರಿವಾಳದ ಆಟ ಛಂದಾ

# ಗುಡಿಯು ನೋಡಿರಣ್ಣಾ

ಛಂದಸ್ಸಿನ ದೃಷ್ಟಿಯಿಂದ ಶರೀಫರ ಅಚ್ಚುಕಟ್ಟಾದ ಹಾಡುಗಳಲ್ಲಿ ಇದೂ ಒಂದು. ಗಣ, ಪ್ರಾಸ ಮೊದಲಾದವುಗಳು ಇಲ್ಲಿ ನಿಯತವಾಗಿ ಬಂದಿವೆ. ದಾಟಿಯಲ್ಲಿ ವಿಶೇಷವೇನೂ ಇಲ್ಲದಿದ್ದರೂ ತಾಳಗತ್ತು ಎದ್ದು ಕೇಳುವಂತೆ ಈ ಪದವನ್ನು ಹುಮ್ಮಸ್ಸಿನಿಂದ ಹೇಳಬಹುದಾಗಿದೆ.

'ದೇಹವೇ ದೇಗುಲ' ಎಂದು ಬಸವಣ್ಣನವರು ಒಂದೆಡೆ ಹೇಳಿದ್ದಾರೆ. 'ಗುಡಿಯ ನೋಡಿರಣ್ಣಾ 'ಎಂಬಲ್ಲಿ ಹೊಸ ವಿಚಾರವಿಲ್ಲದಿದ್ದರೂ, ಅದರಲ್ಲಿ ತತ್ವವನ್ನು ಹಂತ ಹಂತವಾಗಿ ಕಟ್ಟಿದ ರೀತಿ ಅಂದವಾಗಿದೆ ದೇಹದ ಗುಡಿಯಲ್ಲಿ ಪೊಡವಿಯೊಡೆಯನಾದ ಪರಮಾತ್ಮನು ಕಡು ಬೆಡಗಿನಿಂದೆ. ಅಡಗಿಕೊಂಡಿದ್ದಾನೆ— ಎಂಬಲ್ಲಿ ಸ್ವಾರಸ್ಯವಿದೆ.

ಶಿಶುನಾಳಧೀಶನನ್ನು ಇಲ್ಲಿ ಕವಿ ಯೋಗಿರಾಜನೆಂದು ಮನಗಂಡಿದ್ದಾನೆ.

ದೇಹದ ಗುಡಿಯಲ್ಲಿ ನಡೆಯುವ ನಾದ ಆನಂದಮಯವಾದುದು ಎಂದು . ಶರೀಫರು ತಮ್ಮ ಅನುಭವವನ್ನೇ ಅಭಿವ್ಯಕ್ತಗೊಳಿಸಿದ್ದಾರೆ. ಆರು ಮೂರು ಕಟ್ಟಿದಾಗ ಎಂದರೆ ಕಾಮ ಕ್ರೋಧ ಮೊದಲಾದವುಗಳನ್ನು ಬಂಧಿಸಿದಾಗ ಮತ್ತು ತ್ರಿಗುಣಾತೀತನಾದಾಗ ಪರಮಾನಂದ ಸಾಧ್ಯವೆಂಬುದೇ ಬಹುಶಃ ಈ ಪದದ ಗುಟ್ಟು ಎನ್ನಬಹುದು.

# ಗುಡಿಯ ನೋಡಿರಣ್ಣಾ

ಗುಡಿಯ ನೋಡಿರಣ್ಣಾ । ದೇಹದ ।
ಗುಡಿಯ ನೋಡಿರಣ್ಣಾ ॥ಪಲ್ಲ॥

ಗುಡಿಯ ನೋಡಿರಿದು
ಪೊಡವಿಗೆ ಒಡೆಯನು
ಅಡಗಿ ಕೊಂಡು ಕಡು ಬೆಡಗಿನೊಳಿರುತಿಹ
ಗುಡಿಯ ನೋಡಿರಣ್ಣಾ ॥ಅನುಪಲ್ಲ॥

೧

ಮೂರು ಮೂಲೆಯ ಕಲ್ಲು। ಅದರೊಳು।
ಜಾರುತಿರುವ ಕಲ್ಲು
ಧೀರ ನಿರ್ಗುಣನು ಸಾರ ಸಗುಣದಲಿ
ತೋರಿ ಅಡಗಿ ತಾ ಬ್ಯಾರ‍್ಯಾಗಿರುತಿಹ
ಗುಡಿಯ ನೋಡಿರಣ್ಣಾ

೨

ಆರು ಮೂರು ಕಟ್ಟಿ । ಮೇಲಕೆ।
ಏರಿದವನು ಘಟ್ಟಿ
ಭೇರಿ ಕಾಳಿ ಶಂಖ
ಭಾರಿ ಸುನಾದದಿ
ಮೀರಿದಾನಂದ ತೋರಿ ಹೊಳೆಯುತಿಹ
ಗುಡಿಯ ನೋಡಿರಣ್ಣಾ

೩

ಸಾಗುತಿಹವು ದಿವಸ। ಬಹುದಿನ।
ಹೋಗಿ ಮಾಡಿ ಪಾಯ್ಸ
ಯೋಗಿರಾಜ ಶಿಶುನಾಳಧೀಶ ತಾ-
ನಾಗಿ ಪರಾತ್ಪರ ಬಹ್ಮರೂಪನಿಹ
ಗುಡಿಯ ನೋಡಿರಣ್ಣಾ

# ನಾನಾರೆಂಬುದು ನಾನಲ್ಲ

ಸಾಮಾನ್ಯವಾಗಿ ನಿರಾಕಾರವನ್ನು ಸಾಕಾರಗೊಳಿಸುವ ರೀತಿ ಶರೀಫರದು. ಕಣ್ಣಿಗೆ ಕಾಣುವ ಸಂಗತಿ ಸನ್ನಿವೇಶಗಳು ಅವರ ಪದಗಳ ಉಗಮಸ್ಥಳಗಳು. ಆದರೆ ನಿರಾಕಾರವನ್ನು ನಿರಾಕಾರದ ರೀತಿಯಲ್ಲಿ ಮೂಡಿಸುವ ಕೆಲವೇ ಪದಗಳಲ್ಲಿ ಇದು ಒಂದು.

ಇದು ಏಕದಾರಿಗೆ ಹದುಳವಾಗಿ ಹೊಂದಿಕೊಳ್ಳುವ ಹಾಡು. ರಚನೆಯಲ್ಲಿ ಅಷ್ಟು ಸರಳವಾಗಿದೆ. ಸ್ವರದ ಪ್ರವಾಹ ನಿರರ್ಗಳವಾಗಿದೆ 'ನಾ' ಎಂಬುದು ತಾನಾಗಿ ಲಯಿಸುವಂತೆ ಇದರ ಛಂದೋಲಯ ಬಯಲಲ್ಲಿ ಬಯಲಾಗಿದೆ.

ಅದು ನಾನಲ್ಲ; ಇದು ನಾನಲ್ಲ; ಯಾವುದೂ ನಾನಲ್ಲ ಎಂಬುದು ಈ ಪದದ ಪಲ್ಲವಿ. "ನಾ ಅಳಿಯದೆ ನಾ ತಿಳಿಯಲಾರದು" ಎಂಬುದು ಈ ಹಾಡಿನ ಗೂಢ ಭಾವ. ಹೆಮ್ಮೆ ಕರಗದೆ ಮುಕ್ತಿ ದೊರೆಯದೆಂದು ಶರೀಫರು ಇಲ್ಲಿ ಸೂಚಿಸಿದ್ದಾರೆ. ತನ್ನನ್ನು ತಾನು ಮರೆತರೆ ಮಾತ್ರ ಪರಾತ್ಪರನಾದ ಪರಮಾತ್ಮನಲ್ಲಿ ಬೆರೆಯುವುದು ಸಾಧ್ಯವೆಂಬುದು ಈ ಪದ್ಯದ ತಿರುಳು.

# ನಾನಾರೆಂಬುದು ನಾನಲ್ಲ

ನಾನಾರೆಂಬುದು ನಾನಲ್ಲಾ | ಈ
ಮಾನುಷ ಜನ್ಮವು ನಾನಲ್ಲಾ
ನಾರಾಯಣ ವರ ಬ್ರಹ್ಮ ಸದಾಶಿವ
ನೀಯೆನಿಸುವ ಗುಣ ನಾನಲ್ಲ

೧

ಮಾತಾ ಪಿತ ಸುತ ನಾನಲ್ಲ
ಭೂನಾಥ ನಾದವ ನಾನಲ್ಲ
ಜಾತಿ ಗೋತ್ರಗಳು ನಾನಲ್ಲ | ಬಹು
ಪ್ರೀತಿಯ ಸತಿ ಸುತ ನಾನಲ್ಲ

೨

ವೇದ ಓದುಗಳು ನಾನಲ್ಲ
ವಾದ ಮಾಡಿದವ ನಾನಲ್ಲ
ನಾದ ಬಿಂದು ಕಳೆ ಭೇದ ವಸ್ತು ನಿಜ
ಬೋಧದಲ್ಲಿದ್ದವ ನಾನಲ್ಲ.

೩

ನಾನಾಗಿ ನಡೆದವ ನಾನಲ್ಲ | ನಾ
ಶಿಶುನಾಳಧೀಶನ ಬಿಡಲಿಲ್ಲ
ನಾ ಅಳಿಯದೆ ನಾ ತಿಳಿಯಲಾರದು
ನೀಯೆನಿಸುವ ಗುಣ ನಾನಲ್ಲ

# ದಾಸರೋ, ಹರಿದಾಸರೋ

ದಾಸ ಎಂದರೆ ಸರ್ವಸ್ವವನ್ನು ತ್ಯಜಿಸಿ ಪರಮಾತ್ಮನ ಪರಮಭಕ್ತನಾದವನು. ದಾಸರ ಒಂದು ಕೂಟವೇ ನಮ್ಮ ಕನ್ನಡ ನಾಡಿನಲ್ಲಿ ವಾಸಿಸಿ ಧರ್ಮವನ್ನು ಬೋಧಿಸಿದ ಕಾಲವೊಂದಿತ್ತು. ಅವರಲ್ಲಿ ಪುರಂದರ ಮತ್ತು ಕನಕದಾಸರ ಹೆಸರುಗಳು ಅತ್ಯಂತ ಪ್ರಸಿದ್ಧವಾಗಿದ್ದು ಅವರ ಪದಗಳು ಇಂದಿಗೂ ನಾಡಿನ ನಾಲಿಗೆಯ ಮೇಲಿವೆ.

"ತನುವ ತಂಬೂರಿ ಮಾಡಿ
ಪ್ರಣವ ನಾದ ಸ್ವರದಿ ಹಾಡಿ
ಚಿನುಮಯಾತ್ಮನ ಒಲವಿಲ್ಲೈದು
ಮನೆ ಭಿಕ್ಷೆಯ ಬೇಡುವಂಥ
ದಾಸರು"—ಎಂಥವರಿರಬೇಕು !

ಈ ಹಾಡಿನ ತಿರುಳು ಈ ಪದ್ಯದಲ್ಲಿ ಅಡಗಿದೆ. ಏಕದಾರಿ ಸುಖವಾಗಿ ಹೊಂದಿಕೊಳ್ಳುವಂಥ ಈ ಹಾಡು ದಾಸರ ಹಾಡಿನಂತೆ ನಿರಾಯಾಸವಾಗಿ ಹೊಮ್ಮಿ ಬಂದಿದೆ ಉತ್ಸಾಹದ ಲಯದಲ್ಲಿ.

# ದಾಸರೋ, ಹರಿದಾಸರೋ

ದಾಸರೊ, ಹರಿದಾಸರೊ ‖ ಪಲ್ಲ ‖

೧

ದಾಸರೆನಿಸಿ ಧರ್ಮ ಹಿಡಿದು
ಆಸೆ ಕಡಿದು ತೂರ್ಯದಲ್ಲಿ
ಕಾಸುಕವಡಿ ಕಾಲಿಲೊದ್ದು
ಈಶನೊಲಿಸಿಕೊಂಬುವಂಥಾ
—ದಾಸರೊ ಹರಿದಾಸರೊ

೨

ಸ್ವಾಮಿ ಕೇಶವ ಅಚ್ಯುತ
ಗೋಕುಲದ ಗೋವಿಂದ
ರಾಮಕೃಷ್ಣ ಎಂಬ ಪಂಚ
ನಾಮ ನಿತ್ಯ ಪಠಿಸುವಂಥ
—ದಾಸರೊ ಹರಿದಾಸರೊ

೩

ತನುವ ತಂಬೂರಿ ಮಾಡಿ
ಪ್ರಣವನಾದ ಸ್ವರದಿ ಹಾಡಿ
ಚಿನುಮಯಾತ್ಮನೊಲವಿಲ್ಲೈದು
ಮನೆಯ ಭಿಕ್ಷೆ ಬೇಡುವಂಥಾ
—ದಾಸರೊ ಹರಿದಾಸರೊ

೪

ವರ ಶ್ರೀಮುಖ ಮುದ್ರೆ ಎನಗೆ
ಬರಸಿ ಕೊಟ್ಟ ಶಿರದ ಮೇಲೆ
ಕರವನಿಟ್ಟು ಸಲಹಿದಂಥ
ಶಿಶುವಿನಾಳಧೀಶನ ಹರಿ.
—ದಾಸರೊ ಹರಿದಾಸರೊ

# ಎಂಥಾ ಮೋಜಿನ ಕುದರಿ

ಶರೀಫರ ಪದಗಳಲ್ಲಿ ಕೆಲವು ಮೋಜಿನ ಪಲ್ಲವಿಯೊಡನೆ ಪ್ರಾರಂಭ ವಾಗುತ್ತವೆ. ಅಂಥದೊಂದು ಮೋಜಿನ ಪಲ್ಲವಿ ಇಲ್ಲಿದೆ. ಇದು ಕುತೂ ಹಲವನ್ನು ಕೆರಳಿಸುವ ಪಲ್ಲವಿ. ಕುದುರೆ ಇಲ್ಲಿ ಶರೀಫರ ಚಿತ್ತ ಪ್ರವೃತ್ತಿ-ಯನ್ನು ಸೂಚಿಸುವ ಸಂಕೇತ. ಅವರ ಅರುಹಿನ ಕುರುಹು. ಜ್ಞಾನವನ್ನು ಗಳಿಸಿ ಬೆಳಸಿ ಘನವಾದ ಕಾರ್ಯಕ್ಕೆ ಸರಿಯಾಗಿ ಬಳಸಿದರೆ ಅದು ಸದ್ಗುರು ವಿನ ಪಾದಕ್ಕೆ ಮುಟ್ಟಿಸುವುದೆಂಬ ಗಟ್ಟಿಯಾದ ನಂಬಿಗೆ ಈ ಪದದ ಕೇಂದ್ರ ಭಾವ. "ಸಾರಿ ನಾನು ಹೇಳ್ತಿನಿ ಸಟಿ ಅಲ್ಲ" ಎಂದು ಹಾಡಿದ್ದಾರೆ ಶರೀಫರು. "ದಾಣಿ ತಿಂದು ತಿರಗತೈತಿ ಮೇಗಲ ಓಣಿ" ಎಂಬ ಚರಣದ ಘನವಾದ ಉದ್ದೇಶದ ಸೂಚನೆಯಿದೆ. ಶಿಷ್ಯನು ಗುರುವಿನೊಡನೆ ಬೆರೆದು ಏಕ ಜೀವ ಏಕ ಭಾವವಾದ ಸ್ಥಿತಿಯನ್ನು "ಗೋವಿಂದ ಗುರುವೇ ತಾನೇ ತಾನಾಯ್ತು" ಎಂಬ ಕೊನೆಯ ಚರಣದಲ್ಲಿ ನಿರೂಪಿಸಲಾಗಿದೆ.

ಶರೀಫರ ಹಿಂದಣ ಜನ್ಮಗಳ ಸ್ಮರಣೆ ಈ ಪದದ ಹಿನ್ನೆಲೆ ಎಂದು ಹೇಳುವವರಿದ್ದಾರೆ. ಅದೇನೇ ಇರಲಿ; ಪಾಂಡವರ ಪಾಗಾದ ಗೂಟವ ಜ್ಯಾಡಿಸಿ ಕಿತ್ತು ಶಿಶುವಿನಾಳಕ್ಕೆ ಓಡಿ ಬಂದು ಗುರುವನ್ನು ಕೂಡಿದ ಈ ಕುದುರೆ ನಿಜವಾಗಿಯೂ ಮೋಜಿನ ಕುದುರೆ.

# ಎಂಥ ಮೋಜಿನ ಕುದುರಿ

ಎಂಥಾ ಮೋಜಿನ ಕುದುರಿ| ಹತ್ತಿದ ಮ್ಯಾಲ
ತಿರುಗುವದು ಹನ್ನೊಂದು ಫೇರಿ ||ಪಲ್ಲ||

ಸಾರಿ ನಾನು ಹೇಳತೀನಿ ಸಟಿಯಲ್ಲ ಈ ಮಾತು
ಸತ್ಯ ಸದ್ಗುರುವಿನ ಪಾದ ಗಟ್ಟ್ಯಾಗಿ ಮುಟ್ಟಿಸಿತು
||ಅನುಪಲ್ಲ||

೧

ಹಚ್ಚಗನ್ನ ಕರಡ ಹಾಕಲಿ ಬೇಕೋ
ನಿಚ್ಚಳ ನೀರ ಕುಡಿಸಲಿ ಬೇಕೋ
ಸಂಸ್ಕಾರ ಎಂಬ ಕಮಚಿಲೆ ಹೊಡಿಯಲಿಬೇಕೋ
ಅಚ್ಯುತ ಮೆಚ್ಚುವಂತೆ ಮೈ ತಿಕ್ಕಲಿ ಬೇಕೋ

೨

ತಪ್ಪುವದಿಲ್ಲಪ್ಪಾ ಎರಡು ಹೊತ್ತು ದಾಣಿ
ತಿಂದ ಮೇಲೆ ತಿರಗತೈತೆ ಮೇಗಲ ಓಣಿ
ಖಾದರಲಿಂಗು ಪಾಡಿದ ವಾಣಿ
ಸೋಸಿ ನೋಡಿಕೋ ಹಾಕಿದ ಗೋಣಿ

೩

ಪಾಂಡವರ ಮನಿಯೊಳಗ ಪಾಗಾದಾಗಿತ್ತು
ಪಾಗಾದ ಗೂಟವ ಜ್ಯಾಡಿಸಿ ಕಿತ್ತು
ಹೋಗುವಾಗ ಶಿಶುನಾಳಕೋಡ್ಯೋಡಿ ಬಂತು
ಗೋವಿಂದ ಗುರುವೇ ತಾನೇ ತಾನಾಗಿತ್ತು

# ಎಲ್ಲರಂಥವನಲ್ಲ ನನಗಂಡ

ಶರೀಫರ ಪದಗಳಲ್ಲಿಯೇ ಅತ್ಯಂತ ಚಿತ್ತಾಕರ್ಷಕವಾವ ಗೀತವಿದು. ಗತಿಯ ಗಮಕ, ಮಧುರ ಮಾತಿನ ಚದುರು, ಲಯುವನ್ನು ಗತ್ತಿನಲ್ಲಿ ಎತಿ ಕೊಡುವ ಪ್ರಾಸ ಅನುಪ್ರಾಸಗಳ ವಿಲಾಸ, ಭಾವದ ವೈಖರಿ, ನೇಹದ ನೆಲೆ ಕಲೆ ಒಂದುಗೂಡಿ ಈ ಹಾಡಿಗೆ ಅನುಪಮುವಾದ ಸೊಬಗನ್ನು ನೀಡಿವೆ.

ಇದರಲ್ಲಿಯ ಒಂದೊಂದು ಶಬ್ದ ಶೃಂಗಾರ ಬೆರೆದ ಭಕ್ತಿರಸದಲ್ಲಿ ಮಿಂದು ಬಂದಂತಿದೆ.

ಸತಿಪತಿ ಭಾವವನ್ನು ಹಿತವಾಗಿ ಬಳಸಿ ಬಂದ ಈ ಭಕ್ತಿಗೀತ ಲಾಲಿತ್ಯ ಲಾವಣ್ಯಗಳ ಲೀಲಾಜಾಲವಾಗಿದೆ.

ನಲ್ಲನ ನೇಹವನ್ನು ಗಳಿಸಿದ ನಲ್ಲೆಯೊಬ್ಬಳು ತನ್ನ ಗೆಳತಿಗೆ ಹೇಳಿದ ಕಿವಿ ಮಾತಿನ ಸವಿ ಇಲ್ಲಿದೆ—

ಎನ್ನನು ತಂದು ರತ್ನ ಜೋತಿಯ ಪ್ರಭೆಯೊಳಿಟ್ಟಿಹನೇ

.... .... .... ....

ಎತ್ತ ಹೋಗದೆ ಚಿತ್ತವಗಲದೆ
ಗೊತ್ತಿನಲ್ಲಿ ಕಾಯ್ದು ಎನಗೆ
ಮುತ್ತಿನಾ ಮೂಗುತಿಯ ಕೊಟ್ಟಾನೇ .

ತಮ್ಮ ಪುಣ್ಯದ ಫಲವಾಗಿ ದೊರೆತ ಪುಣ್ಯ ಪುರುಷನು 'ಅಂತರಂಗದ ಕಾಂತ ಶ್ರೀ ಗುರುನಾಥ ಗೋವಿಂದಾ' ಎಂದು ಶರೀಫರು ಗುರುಗೋವಿಂದ ರಿಗೆ ಅಂತರಂಗದ ಭಕ್ತಿಯನ್ನು ಅರ್ಪಿಸಿದ್ದಾರೆ.

# ಎಲ್ಲರಂಥವನಲ್ಲ ನನಗಂಡ

ಎಲ್ಲರಂಥವನಲ್ಲ ನನ ಗಂಡಾ
ಬಲ್ಲಿದನು ಪುಂಡಾ
ಎಲ್ಲರಂಥವನಲ್ಲ ನನ ಗಂಡಾ

೧

ಎಲ್ಲರಂಥವನಲ್ಲ ಕೇಳೇ
ಸೊಲ್ಲು ಸೊಲ್ಲಿಗೆ ಬಯ್ದು ನನ್ನ
ಎಲ್ಲಿಗೋಗದ್ಹಾಂಗ ಮಾಡಿಟ್ಟಾ
ಕಾಲ್ಮುರಿದು ಬಿಟ್ಟಾ
ಎಲ್ಲರಂಥವನಲ್ಲ ನನಗಂಡಾ

೨

ಮಾತಾಪಿತರು ಮನೆಯೊಳಿರುತಿರಲು
ಮನಸೋತು ಮೂವರು
ಪ್ರೀತಿಗೆಳೆತನ ಮಾತಿನೊಳಿರಲು
ಮೈ ಮರೆತು ಮಾಯದಿ
ಘಾತವಾಯಿತು ಯೌವನವು ಬರಲು
ಹಿಂಗಾಗುತಿರಲು
ದೂತೆ ಕೇಳ್ನಮ್ಮವರು ಶೋಭನ
ರೀತಿ-ಚಾರವನೆಲ್ಲ ತೀರಿಸಿ
ಆತನೊಳು ಮೈ ಹೊಂದಿಕೆಯ ಮಾಡಿ
ಮಮತೆಯಲ್ಲಿ ಕೂಡಿ
ಎಲ್ಲರಂಥವನಲ್ಲ ........................

೩

ಅಕ್ಕತಂಗಿಯರಾರು ಮಂದಿಗಳಾ
ಅಗಲಿಸಿದೆನ್ನೆವರ
ಕಕ್ಕುತಾತಿಯ ಅಣ್ಣತಮ್ಮಗಳಾ
ನದರೆತ್ತಿ ಮ್ಯಾಲಕೆ
ನೋಡಗೊಡದೇ, ಹತ್ತು ದಿಕ್ಕುಗಳಾ
ಮಾಡಿದನೆ ಮರುಳಾ
ತೆಕ್ಕೆಯೊಳು ಬಿಗಿದಪ್ಪಿ ಸುರತತಾನಂದರಸ ಗಂಟು
ನಂದಸುಖ ತಾಂಬೂಲ ರಸಗುಟು
ಕಿಕ್ಕಿ ಅಕ್ಕರತಿಯಲಿ ನಗುವನು ತಾ
ಬಹು ಸುಗುಣನೀತಾ
ಎಲ್ಲರಂಥವನಲ್ಲ ನನ ಗಂಡಾ

೪

ತುಂಟ ಸವತಿಯ ಸೊಂಟ ಮುರಿ ಹೊಡದಾ
ಒಣ ಪಂಟಮಾತಿನ
ಗಂಟಗಳ್ಳರ ಮನೆಗೆ ಬರಗೊಡದಾ
ಹದಿನೆಂಟು ಮಂದಿ
ಕುಂಟಲೀಯರ ಹಾದಿಯನು ಕಡಿದಾ
ಎನ್ನ ಕರವ ಪಿಡಿದಾ
ಕುಂಟಕುರಾಡಾರೆಂಟು ಮಂದಿ
ಗಂಟು ಬಿದ್ದರೆ ಅವರ ಕಾಣುತ
ಗಂಟಲಕೆ ಗಾಣಾದನೇಳಕ್ಕಾ
ತಕ್ಕವನೆ ಸಿಕ್ಕಾ
ಎಲ್ಲರಂಥವನಲ್ಲ ...............

೫

ಅತ್ತಿಮಾವರ ಮನೆಯ ಬಿಡಿಸಿದನೇ
ಮತ್ತಲ್ಲಿ ಮೂವರ
ಮಕ್ಕಳೈವರ ಮಮತೆ ಕೆಡಿಸಿದನೇ
ಎನ್ನನ್ನು ತಂದು
ರತ್ನ ಜ್ಯೋತಿಯ ಪ್ರಭೆಯಳಿಸಿದನೇ
ಏನಗೊತ್ತಿದವನೆ
ಎತ್ತ ಹೋಗದೆ ಚಿತ್ತವಗಲದೆ
ಗೊತ್ತಿನಲ್ಲೆ ಇಟ್ಟು ಎನ್ನನು
ಮುತ್ತಿನಾ ಮೂಗುತಿಯ ಕೊಟ್ಟಾನೇ
ಅವನೇನು ದಿಟ್ಟನೇ
ಎಲ್ಲರಂಥವನಲ್ಲ ....................

೬

ಕಾಂತೆ ಕೇಳೇ ಕರುಣ ಗುಣದಿಂದ
ಎನಗಿಂಥ ಪುರುಷನು
ಬಂದು ದೊರಕಿದ ಪುಣ್ಯ ಫಲದಿಂದಾ
ಎನ್ನಂತರಂಗದ
ಕಾಂತ ಶ್ರೀಗುರುನಾಥ ಗೋವಿಂದಾ
ಶಿಶುನಾಳದಿಂದ
ಕಾಂತೆ ಬಾರೆಂತೆಂದು ಕರೆದೇ–
ಕಾಂತಮಂದಿರದೊಳಗೆ ಒಯ್ದು
ಭ್ರಾಂತಿ ಭವ ದುರಿತವನು ಪರಿಹರಿಸಿ
ಚಿಂತೆಯನು ಮರೆಸಿ
ಎಲ್ಲರಂಥವನಲ್ಲ ....................

# ಬಾಲೆ ನೀಲಾಂಜನ ಬೆಳಗು ಬಾ

ನೀಲಾಂಜನ ಬೆಳಗಲು ಕರೆಯುವ ಈ 'ಮಂಗಲ'ವು ಸರಸವಾದ-ಸುಗಮವಾದ ಪದ-ಮೈತ್ರಿಯೊಡನೆ ಸುಳಿದು ಬಂದಿದೆ. ಇದರ ಅನುಪ್ರಾಸ ಕಿವಿಗೆ ಹಿತವನ್ನು ನೀಡುತ್ತದೆ. ನುಡಿಯಲ್ಲಿ ಬೆಡಗು ಇದೆ. ರಾಗದಲ್ಲಿ ಅನುರಾಗ ಇದೆ.

'ದಂದುಗ ಬೇಡ, ಒಂದೇ ಮನವಿರಲಿ ! ಒಡೆಯ ಶಿಶುನಾಳಧೀಶನ ಅಡಿಗೆ ಅಂಗ ಮನ ಮುಡುಪಾಗಿರಲಿ'—ಎಂಬುದು ಈ ಮಂಗಳ ಪದದ ಸಂದೇಶ.

# ಬಾಲೆ ನೀಲಾಂಜನ ಬೆಳಗು ಬಾ

ಬಾಲೆ ನೀಲಾಂಜನ ಬೆಳಗು ಬಾ
ಲೀಲಾನಂದ ವಿಶಾಲ ದಯಾಳಗೆ ||ಪಲ್ಲ||

೧

ಮಿಂದು ಮಡಿಯನುಟ್ಟು ದಂದುಗವ ಬಿಟ್ಟು
ಒಂದೆ ಮನಸಿನಿಂದ ವಂದಿಸುತೆ
ಇಂದುವದನೆ ಜಯ ಎಂದು ಪೊಗಳುತಲಿ
ಸುಂದರ ಗುರು ಗೋವಿಂದನ ಅಡಿಗೆ
ಬಾಲೆ ನೀಲಾಂಜನ ಬೆಳಗು ಬಾ

೨

ಮೂರಾರು ದಳದೊಳು ತೋರಿ ಅಡಗುವ ಜ್ಯೋತಿ
ಬೇರೊಂದು ತಳಿಗೆಯೋಳ್ ತುಂಬಿಕೊಂಡು
ನೀರಜ ನಯನೆ ವಿಚಾರ ಮಂತ್ರಾಕ್ಷರ
ಜಪಿಸುತೆ ಕಾರಣ ಮೂರುತಿಗೆ
ಬಾಲೆ ನೀಲಾಂಜನ ಬೆಳಗು ಬಾ

೩

ಪಿಡಿದು ಪಂಚಾರತಿ ನುಡಿದು ಶಿವನ ಸ್ತುತಿ
ಬಿಡದೆ ಗಂಧಾಕ್ಷತಿ ಧರಿಸುತೆ
ಕೊಡುತೆ ಅಂಗವನ ಮುಡುಪಿಡುತಲಿ ಎನ್ನ
ಒಡೆಯ ಶಿಶುನಾಳೇಶನ ಪಾದಕೆ
ಬಾಲೆ ನೀಲಾಂಜನ ಬೆಳಗು ಬಾ

## ಎದ್ದು ಹೋಗತೀನಿ ತಾಳಿಲೋ! ಛೀ ಬುದ್ಧಿಗೇಡಿ

ಅತ್ತೀಗೇರಿಯ ಹಿರೇಮಠದ ಶ್ರೀ ಸಿದ್ಧಲಿಂಗ ಸ್ವಾಮಿಗಳು ಹಲ್ಲಿ ಶಕುನದಲ್ಲಿ ತುಂಬ ಬಲ್ಲಿದರು; ಜ್ಞಾನಿಗಳು. ಶ್ರೀ ಶರೀಫ ಶಿವಯೋಗಿಗಳ ಸಮಕಾಲೀನರು. ಮಠದಲ್ಲಿ ಬ್ರಹ್ಮೋತ್ರಕಾಂಡ ಪುರಾಣ ಪ್ರವಚನ ನಡೆದಿದೆ. ಶಿಷ್ಯ ಓದುವವ, ಶ್ರೀ ಸಿದ್ಧಲಿಂಗ ಸ್ವಾಮಿಗಳು ಅರ್ಥೈಸುತ್ತಾರೆ. ಶಿಷ್ಯ ಅಲ್ಪಮತಿ. ಅಜ್ಞಾನಿ. ಶ್ರೀ ಶರೀಫರ ಯೋಗ್ಯತೆ ಅರಿಯದವ. ಪುರಾಣದ ಸಮಯವಾಗಿದೆ. ಊರ ಜನವೆಲ್ಲ ನೆರೆದಿದ್ದಾರೆ. ಸ್ವಾಮಿಗಳು ಪೂಜೆ ಮುಗಿಸಿಕೊಂಡು ಬರುವ ವೇಳೆಯಾಗಿದೆ. ಶಿಷ್ಯ ಸಜ್ಜುಗೊಳಿಸುತ್ತಿದ್ದಾನೆ. ಶ್ರೀ ಶರೀಫರು ತೂರ್ಯಾವಸ್ಥೆಯಲ್ಲಿ ಶಿಷ್ಯರೊಡಗೂಡಿ ಬಂದು ವೇದಿಕೆಯ ಹತ್ತಿರ ಕುಳಿತರು. ಕ್ಷೌರದ ನಿಂಬಣ್ಣ ಸಿದ್ಧಪತ್ರಿ ಸಜ್ಜುಗೊಳಿಸುತ್ತಿದ್ದಾನೆ. ಇದೆಲ್ಲವನ್ನು ಕಂಡ ಮಠದ ಶಿಷ್ಯ ಗುರು ಶರೀಫರಿಗೆ ಹೀನ ನುಡಿಗಳಾಡಿ ಎದ್ದು ಹೋಗಲು ತಿಳಿಸಿದ. ಅವಾಚ್ಯ ಮಾತಾಡಿದ. ಆ ಮಾತಿಗೆ ಶ್ರೀ ಶರೀಫರು 'ಎಲೇ ಬುದ್ಧಿಗೇಡಿ, ನಾ ಇಲ್ಲಿಂದ ಹೋಗತೀನಿ, ನೀ ಇಲ್ಲೇ ಇರು' ಎಂದು ಮೇಲೆದ್ದರು. ಅಪ್ರಯತ್ನವಾಗಿ ಹಾಡು ಆಗ ಹೊರಹೊಮ್ಮುತ್ತಿದೆ. "ಎದ್ದು ಹೋಗತೀನಿ ತಾಳೆಲೋ ಛೀ ಬುದ್ಧಿಗೇಡಿ" ಎಂದು. ಬದುಕಿನ ಪಾಪತಾಪ, ಜಡಜಂಜಡತೆಯನ್ನು ಹರಿದುಕೊಂಡು ಮನುಷ್ಯತ್ವದಿಂದ ಮಹಾದೇವತ್ವಕ್ಕೆ ಏರಿದರು.

ಎಲ್ಲಿ ಪುರಾಣ ಪ್ರವಚನಗಳು ನಡೆಯುತ್ತಿವೆಯೋ ಅಲ್ಲಿಗೆ ಅವರು ಧಾವಿಸುತ್ತಾರೆ. ಅವರು ಬದುಕಿರುವಾಗ ಜನತೆ ಅವರ ಮೇಲ್ಮೆಯನ್ನು ಅಷ್ಟಾಗಿ ಗುರುತಿಸಲಿಲ್ಲವೇನೋ. ಅವ ಮುಸಲ್ಮಾನ, ಕುಡುಕ, ಅವನದು ಕರಿಬಾಯಿ, ಹೊಲಸುಬಾಯಿ, ಗಾಂಜೀ ಪಿಶ್ಯಾಳಿ ಎಂದು ಜನ ಮೂದಲಿಸಿದರೇನೋ. ಜಾತಿ ಮತ ಪಂಥ ಕುಲಗೋತ್ರಗಳ ಕಟ್ಟು ನಿಟ್ಟು ನಿಯಮ ನಿರ್ಬಂಧನೆಗಳನ್ನು ಹರಿದೊಗೆದು, ಐಕ್ಯ, ಸಾಮರಸ್ಯ, ಸಹಜೀವನ, ಸಖ್ಯ ಶಾಂತಿ, ಸಹೋದರತ್ವಗಳನ್ನು ಜನತೆಯ ಎದೆಯ ಹೊಲದಲ್ಲಿ ಬಿತ್ತಲು ಬಂದ ಹೃದಯ ಒಕ್ಕಲಿಗ ಅವರು ಎಂಬ ಭಾವನೆ ಸಾಮಾನ್ಯ ಜನಕ್ಕೆ ಅಷ್ಟಾಗಿ ಆಗಲಿಲ್ಲವೇನೋ. ಅವರ ಹೊರವೈ ಜೀವನ, ಅವರ ವಾಕ್-ಸಿದ್ಧಿಗೆ ಜನ ಹೆದರಿ ಅವರಿಂದ ಆದಷ್ಟು ದೂರ ಉಳಿದಿರಲು ಸಾಕು ಎನಿಸುವದು. ಅದು ಕಾರಣ ಜನತೆ ಅವರ ಸಂಪರ್ಕದಿಂದ ದೂರವಾಗಿ ಅಮೃತ ಪಾನಕ್ಕೆ ಎರವಾಯಿತು.

## ಎದ್ದು ಹೋಗತೀನಿ ತಾಳೆಲೋ! ಛೀ ಬುದ್ಧಿಗೇಡಿ

ಎದ್ದು ಹೋಗತೀನಿ ತಾಳೆಲೋ | ಛೀ ಬುದ್ಧಿಗೇಡಿ
ಎದ್ದು ಹೋಗತೀನಿ ತಾಳೆಲೋ

ಎದ್ದು ಹೋಗತೀನಿ ತಾಳೆಲೋ
ಇದ್ದು ಇಲ್ಲೆ ಭವಕೆ ಬೀಳೋ
ಸದ್ಯ ಸದ್ಗುರು ಶಾಪ ನಿನಗೆ
ಸಿದ್ಧಲಿಂಗನ ಪಾದ ಸಾಕ್ಷಿ........

ಹಟದಿ ನಮ್ಮನ್ಯಾಕ ನೋಡುತಿ | ಒಣ |
ಕಟಗಿಯಂತೆ ಸೆಟೆದುಕೊಂಡು ಮಾತನಾಡುತೀ
ಚಟಕಿ ಹೊಡೆದು ಬಟ್ಟ ಕುಣಿಸಿ
ಕಠಿಣ ಕಲಹ ಗುಣ ಗುಣಗಳೆಣಿಸಿ
ಕಟಕಿ ದೋಷವು ತಟ್ಟತೋ ಹಿರಿಯ ಮಠದ ಪಾದಸಾಕ್ಷಿ

ನಿಂದೆನಾಡಿ ನೀಚನಾದಿಯೋ | ಇದ |
ರಿಂದ ದಂದುಗಕ್ಕೆ ಬಂದು ಬಿದ್ದಿಯೋ
ತಂದೆ ಗುರುಗೋವಿಂದ ರಾಜನ
ದ್ವಂದ್ವ ಪಾದವ ನಂಬಿದವರಿಗೆ
ಕುಂದನಿಟ್ಟೆ ಮಂದ ಮನುಜ
ಹಂದಿ ಜಲ್ಮಕ ಬಿದ್ದಿ ತಮ್ಮಾ

ಮಂಡಲಕ್ಕೆ ಮಹಿಮೆ ಸಾಗರ ಬ್ರಹ್ಮೋತ್ರಕಾಂಡ
ಪಂಡಿತರಿಗೆ ಪಾರಮಾರ್ಥದಾಗರಾ| ಇದರೊಳಗೆ ನೀನು
ಬಂಡು ಬರಿದೆ ಬೊಗಳು ಅಕ್ಷರ ನಾ ಕಂಡಿದ್ದಿಲ್ಲಾ
ಪುಂಡ ಶಿಶುನಾಳಧೀಶನ ದಂಡಕೋಲು ಕೈಯೊಳು ಪಿಡಿದು
ದಿಂಡುತನವ ಮುರಿದು ನಿನ್ನ ಚಂಡಿತನವ ಬಿಡಿಸಿ ಮೌಜಿಲೆ

## ಮಾನಾಪಮಾನ ಎರಡು ನಿನ್ನವಮ್ಮಾ ! ಎನಗೇನು !

ಶ್ರೀಗುರು ಗೋವಿಂದ ಯತಿಗಳು, ಶರೀಫ ಶಿವಯೋಗಿಗಳನ್ನು ಜನ ಅರಿಯಲಿಲ್ಲ. ಬ್ರಾಹ್ಮಣ ಜನಗಳು ಶ್ರೀ ಗೋವಿಂದ ಭಟ್ಟರನ್ನು ಮೂದಲಿಸಿದರು. ಸೆರೆ ಕುಡಿತಾನ, ಗಾಂಜೀ ಸೇದತಾನ, ಮುಸಲ್ಮಾನನನ್ನು ಶಿಷ್ಯಾ ಮಾಡಿಕೊಂಡಾನ, ಬ್ರಾಹ್ಮಣಾಗಿ ಮಡಿಮೈಲಿಗಿಲ್ಲ, ಕುಡಕರನ್ನ ಕಟ್ಟಿ-ಕೊಂಡು ಪಿರಿಪಿರಿ ತಿರಗತಾನ ಎಂದು ನಂಜಿನ ನುಡಿಯಾಡಿದರು. ಜನ-ತೆಯ ಕುಹಕ ನುಡಿ, ಕಟುವಾದ ಟೀಕೆ, ತುಚ್ಛವಾದ ತೆಗಳಿಕೆಗಳಿಗೆ ಯತಿಗಳು ಮೌನ. ತಮ್ಮನ್ನು ತಮ್ಮವರೇ ಬಹಿಷ್ಕರಿಸಿ, ಅಲ್ಲದುದನ್ನು ಆಡಿ ಮನ ನೋಯಿಸಿದಾಗಲೂ ಅವರು ಶಾಂತಚಿತ್ತರು. ಜನತೆಗೆ ಪ್ರತಿಯಾಗಿ ಉತ್ತರ ಕೊಟ್ಟವರಲ್ಲ ನಿಂದಿಸಿ ನುಡಿದವರಲ್ಲ. ಜಗದ ನಿಂದೆಗೆ ಕಿವು-ಡರು. ಜನಗಳ ಅಪವಾದ, ತಿರಸ್ಕಾರ, ತೆಗಳಿಕೆ, ಮೂದಲಿಕೆಗಳ ನಂಜ-ನ್ನೀಂಟಿದ ನೀಲಕಂಠರಾಗಿದ್ದಾರೆ. ಗುಡಗೇರಿಯ ಮಹಾಲಕರಿ ಸಾಹೇಬರು ಲಕ್ಷ್ಮೇಶ್ವರಕ್ಕೆ ಚಕ್ಕಡಿಯಲ್ಲಿ ಹೊರಟಿದ್ದಾರೆ. ಊರ ಹೊರಗಡೆಯಲ್ಲಿ ಚಕ್ಕಡಿ ಹೊರಟಾಗ ಕಳಸದಿಂದ ಶ್ರೀ ಗೋವಿಂದ ಯತಿಗಳು ಶಿಷ್ಯರೊಡ-ಗೂಡಿ ಗುಡಿಗೇರಿಗೆ ಬರುತ್ತಿದ್ದಾರೆ. ಸಾಹೇಬರು ತಮ್ಮ ಕಡೆಗೆ ಬರುವ ಶರಣರನ್ನು ಕಂಡು ತುಚ್ಛವಾಗಿ, "ಕುಡಕರು ಹ್ಯಾಂಗ ಬರತಾರ ನೋಡ" ಎನ್ನುವರು. ಆ ನುಡಿ ಕೇಳಿದ ಶ್ರೀ ಶರೀಫರು ಗುರುಗಳಿಗೆ, 'ಯಪ್ಪಾ ಹೀಂಗ ಅಂತಾರಲಾ' ಎನ್ನುವರು. ಶಾಂತಚಿತ್ತದಿಂದಲೇ ಗುರುಗಳು ಹೇಳುತ್ತಾರೆ. "ಇರಲಿ ಬಾರೋ ಶರೀಫಾ ಈಗ ಕುಡಕರ ಕಡಿ ಬರತಾನ" ಎಂದು, ಗುಡಿಗೇರಿಯ ಗ್ರಾಮದೇವತೆ ದ್ಯಾಮವ್ವನ ಸೇವೆಯಲ್ಲಿ ಕುಳಿತ ಸಂತರು ಮೊರೆಯಿಡುತ್ತಿದ್ದಾರೆ. 'ಮಾನಾಪಮಾನ ಎರಡು ನಿನ್ನವಮ್ಮಾ' ಎಂದು. ತಾಯೀ ಜನತೆಯ ಅಜ್ಞಾನ ಪರಿಹರಿಸು. ಕತ್ತಲೆಯನ್ನು ಕಳೆ. ಅರುಹಿನ ಜ್ಯೋತಿ ಬೆಳಗಲಿ. ತಮ್ಮನ್ನು ನೋಯಿಸಿದ ಜನತೆಯ ಕುರಿತು ಅವರಿಗೆ ಕೋಪವಿಲ್ಲ, ಕನಿಕರವಿದೆ. ಆಕ್ಷೇಪಣೆಯಿಲ್ಲ, ಆದರವಿದೆ. ಮಾತ್ಸರ್ಯವಿಲ್ಲ, ಮಮತೆಯಿದೆ.

ಚಕ್ಕಡಿ ಹೊಡೆಯುವ ತಳವಾರ ನಿಂಗ ಸಾಹೇಬರಿಗೆ ಹೇಳುತ್ತಿದ್ದಾನೆ.

ರಾವಸಾಹೇಬ ಅವರನ್ನು ಯಾಕಾರ ನೀವು ತಡವಿದಿರಿ ಎಂದು ನಾರಾ-
ಯಣ ಘಟ್ಟಕ್ಕೆ ಚಕ್ಕಡಿ ಬಂದಿದೆ. ಸಾಹೇಬರಿಗೆ ಹೊಟ್ಟೆ ನೋವು;
ಸಂಕಟ; ಯಾತನೆ. ತಿರುಗಿ ಬಂದು ಸಂತರ ಕಾಲಿಗೆರಗಿ ಯಾಚಿಸುತ್ತಿ
ದ್ದಾರೆ. ಕರುಣಿಸೆಂದು ಮೊರೆ ಇಡುತ್ತಿದ್ದಾರೆ. ಹುಚ್ಚಾ ! ಅವಳಿಗೇ
ಬೇಡಿಕೋ, ಕರುಣೆಸಿಯಾಳು' ಎನ್ನುತ್ತಾರೆ.

## ಮಾನಾಪಮಾನ ಎರಡು ನಿನ್ನವಮ್ಮಾ ! ಎನಗೇನು !

ಮಾನಾಪಮಾನ ಎರಡು ನಿನ್ನವಮ್ಮಾ | ಎನಗೇನು |
ಶ್ವಾನನಂತೆ ಬೊಗಳುತಿಹರು
ಹೀನ ಜನರೆಲ್ಲರಿರುವರು...............

ಸದಾ ನಿನ್ನ ಧ್ಯಾನದೊಳಿರಲು
ಮದಾ ಬಂದಿತೆಂಬುವರಿವರು
ಕದನವ ಮಾಡುವವರು
ನಿಧಾನವ ತಿಳಿಯದವರು
ಇದು ನಿನ್ನ ಮನಸಿಗೆ
ಮೃಧುವಾದರೊಳಿತಮ್ಮ

ನಿನ್ನ ಚಿಂತೆಯೊಳಿರಲು
ಬನ್ನ ಬಡಿವರೆನ್ನ ಖಳರು
ಸಣ್ಣ ಮಾತನಾಡುವವರು
ಸೊನ್ನಿ ಸೂಕ್ಷ್ಮವರಿಯದವರು
ಎನಗೇನು ಕುಂದವದು
ನಿನಗದು ಹೊಂದುವದು

ನಿಜಾನಂದ ಬೋಧ ಎನಗೆ
ಕುಜನರ ನಿಂದೆ ನಿನಗೆ
ಸುಜನರ ರಕ್ಷೆಯೊಳಗೆ
ಗಜಿಬಿಜಿಸುವುದಮ್ಮ
ಭಜಿಸುವೆ ಗುಡಿಪುರ
ನಿಜ ವಿಷಯ ನಾಯಕಿ

# ಗಿರಣಿ ವಿಸ್ತಾರ ನೋಡಮ್ಮ

ಮಹಾತ್ಮಾ ಹಜರೇಶಾ ಖಾದರಲಿಂಗರ ಆಶೀರ್ವಾದದಿಂದ ಜನಿಸಿ, ಗುರು ಗೋವಿಂದ ಯತಿಗಳ ಗರಡಿಮನೆಯಲ್ಲಿ ಯೋಗಾಭ್ಯಾಸ ಕೈಕೊಂಡ ಶ್ರೀ ಶರೀಫರು, ಸಿದ್ಧಿ ಶೈಲವನ್ನೇರಿದ್ದಾರೆ. ಮೂರು ದೇಹ-ದೊಳಿದ್ದು, ತೋರುತಿಹ ಭವಬದ್ದು ತಾರಕದ ಮನೆಯೊಳಗೆ ಮನ ನೆಲಸಿದೆ. ಭೂತ, ಭವಿಷತ್ತಿನ ಆಗುಹೋಗುಗಳೆಲ್ಲ ಅವರಿಗೆ ನಿಚ್ಚಳ. ಅವರ ದೇಹವೇ ಶ್ರುತಿಗೊಳಿಸಿಟ್ಟ ವೀಣೆಯಾಗಿದೆ. ಎಂಥ ಸೂಕ್ಷ್ಮ ಘಟನೆಗೂ ಅದು ಅಣು ರಣಗೊಳ್ಳುವದು. ಮಿಡಿಯುವದು. ಒಳಹೊರಗೆಲ್ಲ ಏಕವಾಗಿ ಲೀಲೆ ಯಿಂದ ಚರಿಸುವ ಅವರಿಗೆ ಒಂದೊಂದು ವಸ್ತುವೂ ಸ್ಫೂರ್ತಿ ನೀಡುತ್ತದೆ. ಅಪ್ರಯತ್ನವಾಗಿ, ನಿರ್ಮಲವಾಗಿ,ನಿರಾಯಾಸವಾಗಿ ಕಾವ್ಯ ಹೊಮ್ಮುತ್ತದೆ. ಹೊರಗಿನ ಘಟನೆಯ ಚಿತ್ರ ಅಲ್ಲಿಯೇ ನಿಲ್ಲದೇ, ಒಳಕ್ಕೆ ಇಳಿಯುತ್ತದೆ. ಬದುಕಿನ ಸಾಮನ್ಯ ವಸ್ತು ತಾತ್ವಿಕ ಮೆರಗನ್ನು ಪಡೆದು, ಅಸಮಾನ್ಯತ್ವಕ್ಕೇ ರುತ್ತದೆ. ಪ್ರಾಪಂಚಿಕ ಸಣ್ಣ ವಸ್ತುಗಳೆಲ್ಲ ತಮ್ಮ ಜಡತ್ವವನ್ನು ನೀಗಿ ಕೊಂಡು ಪಾರಮಾರ್ಥಿಕದ ವಿಲಕ್ಷಣ ಅರ್ಥ ನೀಡುವವು. ಅಶಾಶ್ವತ ವಾದುದು ಶಾಶ್ವತ ಪದವಿ ಪಡೆಯುವದು. ಅನಿತ್ಯವಾದುವು ನಿತ್ಯತ್ವವನ್ನ ಪ್ಪುತ್ತದೆ. ಲೌಕಿಕ ಘಟನೆ ಅಲೌಕಿಕ ಚೆಲುವನ್ನು ಪಡೆಯುತ್ತದೆ.

ಶ್ರೀ ಶರೀಫ ಶಿವಯೋಗಿಗಳ ಮನವೇ ಮದ್ದಿನ ಮನೆಯಂತೆ. ಹೊರಗಿನ ಒಂದು ಸಣ್ಣ ಕಿಡಿಯೇ ಸಾಕು. ಅವರು ಎಲ್ಲಿಯೇ ಇರಲಿ, ಏನನ್ನೇ ಕಾಣಲಿ, ಅದು ಕಾವ್ಯಕ್ಕೆ ವಸ್ತುವಾಗುವದು. ಅವರ ಪದ್ಯಗಳೆಲ್ಲ ಎರಡು ಅರ್ಥ ನೀಡುತ್ತದೆ. ತೋರಿಕೆಯ ಅರ್ಥ ಒಂದು. ತೋರಿಕೆಯ ಅರ್ಥದ ಹಿಂದೆ ನಿಂತು ನಲಿಯುವ ಪಾರಮಾರ್ಥಿಕ ಅರ್ಥ ಮತ್ತೊಂದು. ಜನಜೀವನದ ನೂರೆಂಟು ಘಟನೆ, ವಸ್ತುಗಳು, ಕೆಲಸಗಳು— ಕುಟ್ಟುವ, ಬೀಸುವ, ನೂಲುವ, ರೈಲು, ಗಿರಣಿ, ಜಾತ್ರಿ, ಉತ್ಸವ, ಹಬ್ಬ ಹುಣ್ಣಿಮೆ ಇತ್ಯಾದಿಗಳು— ಅವರ ಕೈಯಲ್ಲಿ ಎಂದಿಲ್ಲದ ಸೊ ಗನ್ನು ಪಡೆಯುತ್ತವೆ.

೧೮೮೭ ರಲ್ಲಿ ಹುಬ್ಬಳ್ಳಿಯಲ್ಲಿ **Fobres & Fobres** ಎಂಬ ಇಂಗ್ಲಿಷ ಕಂಪನಿಯ ಏಜೆಂಟರಿಂದ ಸ್ಥಾಪಿತವಾದ ಅರಿವೆ ಗಿರಣಿ ಕಂಡು ಸಂತಸಬಟ್ಟು ಹಾಡುತ್ತಾರೆ. ಗಿರಣಿ ವಿಸ್ತಾರ ನೋಡಮ್ಮ। ಶರಣು ಕೂಡಮ್ಮಾ

# ಗಿರಣಿ ವಿಸ್ತಾರ ನೋಡಮ್ಮ

ಗಿರಣಿಸಾರ ವಿಸ್ತಾರ ನೋಡಮ್ಮ
ಶರಣೀ ಕೂಡಮ್ಮ
    ಧರಣಿಪತಿಯು ರಾಣಿ
    ಕರುಣಾಕ ರಾಜ್ಯಕೆ
    ತರಸಿದ ಘನ ಚೋದ್ಯವೋ ಚೀನಾದ ವಿದ್ಯವೋ

ಜಲ ಅಗ್ನಿ ವಾಯು ಒಂದಾಗಿ
ಕಲೆತು ಚಂದಾಗಿ
ನೆಲದಿಂದ ಗಗನಕೆ ಮುಟ್ಟಿದಂತೆಸೆವುದು
ಚೆಲುವ ಚೆನ್ನಿಗವಾದ ಕಂಭವೋ, ಹೊಗಿಯ ಬಿಂಬವೋ

    ಒಳಗೊಂದು ಬೇರೆ ಆಕಾರ
    ತಿಳಕೋ ಚಮತ್ಕಾರ
    ದಳಗಳೊಂಬತ್ತು ಚಕ್ರ ಸುಳಿವ ಸೂತ್ರಾಧಾರ
    ಲಾಳಿ ಮೂರು ಕೊಳವಿಯೊಳು ಎಳೆತುಂಬುತದರೊಳು

ಅಲ್ಲಿ ಬರದಿಟ್ಟರಳಿ ಹಿಂಜಿ
ಅಲ್ಲ್ಯಾದವು ಹಂಜೀ
ಗಾಲಿಯೆರಡರ ಮೇಲೆ ಮೂಲ ಬ್ರಹ್ಮದ ಶೀಲ
ನಾಡಿ ಸುಷ್ಮಮ್ನ ಕೂಡಿ
ಅಲ್ಲ್ಯಾಯ್ತೋ ಕುಕ್ಕಡಿ

    ಪರಮಾನೆಂಬುವ ಪಟ್ಟೀವೋ |ಅಲ್ಲೆ|
    ಮಾರಾಕಿಟ್ಟೆವೋ
    ಪರಮಾನೆಂಬುವ ಪಟ್ಟೀವೋ
    ಧರೆಯೊಳು ಶಿಶುನಾಳ ದೇವಾಂಗ ಋಷಿಯಿಂದ
    ನೇಸಿ ಹಚ್ಚಡ ಹೊಚ್ಚಿತೋ, ಲೋಕ ಮೆಚ್ಚಿತೋ

# ನಾ ನಿನ್ನ ಮಗಾ ನಗೆಗೀಡು ಮಾಡಬ್ಯಾಡ್ರೀ ಜಗದೊಳಗ

ಶ್ರಾವಣಮಾಸ, ಹೂಲಗೂರಿನ ಜಮಖಂಡಿ ಮಠದಲ್ಲಿ ಪ್ರಭುಲಿಂಗ ಲೀಲಾ ಪುರಾಣ ನಡೆದಿದೆ. ಶ್ರೀ ಚೆನ್ನವೀರಸ್ವಾಮಿಗಳು ಪ್ರಭುದೇವನ ಮಹಿಮೆಯನ್ನು ರಸವತ್ತಾಗಿ ಉಣಿಸುತ್ತಾರೆ. ಶರೀಫ ಶಿವಯೋಗಿಗಳು ದಿನಾಲು ಮಹಾತ್ಮಾ ಹಜರೇಶಾ ಖಾದರಲಿಂಗರ ಗದ್ದುಗೆಗೆ ಹೋಗುವರು. ಪ್ರಭುಲಿಂಗಲೀಲಾ ಪುರಾಣ ಎಲ್ಲಿಯೇ ಹಚ್ಚಿರಲಿ, ಅಲ್ಲಿಗೆ ಶ್ರೀ ಶರೀಫರು ಧಾವಿಸುತ್ತಾರೆ. ಆರು ಶಾಸ್ತ್ರ, ಹದಿನೆಂಟು ಪುರಾಣ ನನ್ನ ಬಗಲಾಗ, ಪ್ರಭು ಲಿಂಗಲೀಲಾ ನನ್ನ ತಲಿಮ್ಯಾಲ ಎನ್ನುವರು. ಆ ಪುರಾಣ ತಲೆಯ ಮೇಲೆ ಇಟ್ಟುಕೊಂಡು ಕುಣಿಯುತ್ತಾರೆ. ಓದಿದಷ್ಟೂ, ಓದುವ ಹಸಿವು ಹೆಚ್ಚುತ್ತದೆ.

ಜಮಖಂಡಿ ಮಠಕ್ಕೆ ಶರೀಫರು ಹೋಗುತ್ತಾರೆ. ಬಾಗಿಲಲ್ಲಿಂದಲೇ "ಯಪ್ಪಾ" ಎಂದು ಶ್ರೀ ಚನ್ನವೀರ ಸ್ವಾಮಿ.ಗಳನ್ನು ಕೂಗುತ್ತಾರೆ. ಸ್ವಾಮಿ ಗಳಿಗೆ ಶರೀಫರ ಮಹತ್ತು ಗೊತ್ತು. ಗೌರವಭಾವದಿಂದ ಕರೆಯುತ್ತಾರೆ.

ಪುರಾಣ ನಡೆದಿದೆ. ಪ್ರಭುದೇವನ ನಾಮ ಮಾತ್ರವೇ ಶರೀಫರನ್ನು ಪುಲಕಿತಗೊಳಿಸುತ್ತದೆ. ತಮ್ಮನ್ನು ತಾವು ಮರೆಯುತ್ತಾರೆ. ಆವುದೋ ಅನಿರ್ವಚನೀಯ ಆನಂದ ಮೈತುಂಬುತ್ತದೆ. ತೂರ್ಯಾವಸ್ಥೆಯಲ್ಲಿ ಬಂದು ಸ್ವಾಮಿಗಳ ಆಸನದ ಮಗ್ಗುಲಿಗೆ ಕುಳಿತರು. ಸ್ವಾಮಿಗಳು ಹಸನ್ಮುಖಿಗಳಾ ಗಿದ್ದಾರೆ. ಜನತೆಗೆ ಶರೀಫರು ಬಂದು ಸ್ವಾಮಿಗಳ ಮಗ್ಗಲಲ್ಲಿ, ಅದರಲ್ಲೂ ಪುರಾಣ ಓದುವಾಗ, ಕುಳಿತುದು ಸಹನವಾಗಲಿಲ್ಲವೇನೋ. ಗುಜುಗುಜು ಮಾತು ಪ್ರಾರಂಭವಾಗಿ ಪುರಾಣಕ್ಕೆ ತಡೆ ಹಾಕಿತು. ವೀರಮಡಿವಂತರು ಅಲ್ಲಮದನ್ನು ಆಡಿದರು, ಹಳಿದರು. ಶ್ರೀ ಶರೀಫರಿಗೆ ಕೋಪವಿಲ್ಲ. ಪ್ರತಿಯಾಗಿ ಸ್ವಾಮಿಗಳಲ್ಲಿ ಬೇಡಿಕೊಳ್ಳುತ್ತಿದ್ದಾರೆ.

'ನಾ ನಿನ್ನ ಮಗಾ, ನಗೆಗೇಡು ಮಾಡಬ್ಯಾಡೀ ಜಗದೊಳಗ' ಎಂದು ಹಾಡುತ್ತಿದ್ದಾರೆ. ಜನತೆ ಶ್ರೀ ಶರೀಫರ ಬೃಹತ್ತು ಮಹತ್ತನ್ನು ಕುರಿತು ಅರಿಯಲಿಲ್ಲ. ಪ್ರತಿಯಾಗಿ ಅವ ಮುಸಲ್ಮಾನ, ಕುಡಕ ಎಂದು ಹಳಿಯಿತು ನಂಜಿನ ನುಡಿ ಆಡಿತು. ಮಾನ ಅಪಮಾನ, ಹೊಗಳಿಕೆ ತೆಗಳಿಕೆಗೆ ಅವರು ಹಿಗ್ಗಲಿಲ್ಲ. ಕುಗ್ಗಲಿಲ್ಲ. ತಮ್ಮ ನೆಲೆಯನ್ನು ಅರಿಯದ ಅಜ್ಞ, ಜನತೆಯ ಕುರಿತು ಕನಿಕರವಿದೆ. ಅಜ್ಞಾನ, ಮೌಢ್ಯಗಳನ್ನು ಕಳೆದು ಎದೆಯ ಗೂಡಿನಲ್ಲಿ ಅರುಹಿನ ದೀಪ ಹೆಚ್ಚುವ ಕಳಕಳಿಕೆ ಇದೆ.

## ನಾ ನಿನ್ನ ಮಗಾ ನಗೆಗೀಡು ಮಾಡಬ್ಯಾಡ್ರೀ ಜಗದೊಳಗ

ನಾ ನಿನ್ನ ಮಗಾ ನಗೆಗೀಡು ಮಾಡಬ್ಯಾಡ್ರಿ ಜಗದೊಳಗ
ನಾ ನಿನ್ನ ಮಗನು ಅಹ್ಯದೆನ್ನುವ ಮಾತಿದು
ಎನ್ನ ಗುರುವಿನುಪದೇಶ ವಚನದಿಂ
ಮುನ್ನ ತಿಳಿದು ಮಹೇಶ ಮಂತ್ರ ಜಪ ತನ್ನೊಳಗಿರುತಿದೆ
ಕುನ್ನಿ ಜನರ ಹಂಗಿನ್ನ್ಯಾತಕ ಭಯ ಚೆನ್ನ ಶ್ರೀಗುರುವೇ

ತಾಯಿ ತಂದೆಗಳ ಇಂದ್ರಿ ವಿಕಾರದಿ
ಕಾಯ ಜನಿಸಿ ಅವರೊಳ್ ಮನವೋಹಿಸಿ
ನೋವು ಬ್ಯಾನಿಯಿಂದಾಯಾಸ ಪಡುತಿರೆ
ಸಾವಿಗಂಜಿ ಬಾಯಾರಿ ಬಳಲುತಿರೆ
ಜೀವದ ಪರವಿಯ ಬಿಟ್ಟಾಚರಿಸುವೆ ನೀ ರಕ್ಷಿಸು ಮಾದೇವ
ದಯಾಸಿಧೇ

ಾರಲೇಸು ಸಂಸಾರ ವಿಷಯ ಸುಖ
ೂರು ದೇಹದೊಳು ಹೇರಿ ಕಳುಹಿದ ಜೀವದ್ಯಾಪಾರ
ರಿತು ಪರಪಾರಮಾರ್ಥದೊಳು ನಾ ಬ್ಯಾರಿರುತಿರೆ
ಾರುಣಿಯೊಳು ಶಿಶುನಾಳಧೀಶನ
ಧಾರ ಹಿಡಿದು ಆನಂದವಾದೆ

# ಕರುಣೆ ಬಾರದೇನೋ ಸದಾಶಿವ

ಶಿಶುನಾಳದ ಮಗ್ಗುಲಿಗೆ ಚೌಡ್ಯಾಳ ಎಂಬ ಊರು. ಅಲ್ಲಿ ಶ್ರೀ ಹಾವಯ್ಯನವರಿದ್ದಾರೆ. ಮಹತ್ತು ಉಳ್ಳವರು; ಶರೀಫರ ಸಮಕಾಲೀನರು. ೧೮೭೨ ರಲ್ಲಿ ನಾಲ್ಕು ತಿಂಗಳಿಂದ ಮಳೆಯ ದರ್ಶನವಿಲ್ಲ. ಭೂಮಿ ಬಿಸಿಲಿಗೆ ಬಿರಿದು ಬಾಯ್ ಬಿಟ್ಟಿದೆ. ದನಕರುಗಳಿಗೆ ಮೇವು ಇಲ್ಲ. ದಿನ ಬೆಳಗಾದರೆ ಜನ ದೈನ್ಯದಿಂದ ಮಳೆಗಾಗಿ ಮುಗಿಲ ಕಡೆಗೆ ನೋಡುತ್ತಿದೆ. ಬಾನೆಲ್ಲ ಬಂಜರು ಬಂಜರು ಭೂಮಿ. ಎಲ್ಲೆಡೆಯಲ್ಲಿ ಉರಿಹತ್ತಿದಂತೆ ಬಿಸಿಲಿನ ಬೇಗೆ. ಮಳೆರಾಯನಿಗಾಗಿ ದೇವಾಲಯಗಳಲ್ಲಿ ಪ್ರಾರ್ಥನೆ, ಭಜನೆ, ಅನ್ನ ಪ್ರಸಾದಗಳ ಹಂಚಿಕೆಯಾಗುತ್ತಿದೆ. ಮಾನವನ ಪೂಜೆಗೆ ಕಠೋರವಾದ ಪ್ರಕೃತಿಯ ಎದೆ ಕರಗಿಲ್ಲ. ಮಳೆಯ ಚಿನ್ಹೆ ಎಲ್ಲಿಯೂ ಇಲ್ಲ. ಜನತೆ ಕಂಗಾಲಾಗಿದೆ.

ಶ್ರೀ ಹಾವಯ್ಯನವರು ಮಳೆರಾಯನನ್ನು ಕರೆತರಲು ಅನಶನವ್ರತ ಕೈಕೊಂಡು ಚೌಡ್ಯಾಳದ ಚನ್ನಬಸವೇಶ್ವರ ದೇವಾಲಯದ ಎದುರಿಗೆ ಕುಳಿತರು. ಸ್ವಾಮಿಗಳು ಬಲು ನಿಷ್ಠುರ ಸ್ವಭಾವದವರು. ೧೫ ದಿನಗಳು ಸಂದಿವೆ. ಮಳೆಯ ಲಕ್ಷಣವಿಲ್ಲ. ಅಲಗು ಕಟ್ಟಿ ಹಾಯ್ದು ಅಸು ನೀಗಲು ಪಣತೊಟ್ಟರು. ಎಲ್ಲ ವ್ಯವಸ್ಥೆ ನಡೆದಿದೆ. ಶ್ರೀ ಶರೀಫರಿಗೆ ಸಮಾಚಾರ ತಿಳಿಯಿತು. ಕೂಡಲೇ ಧಾವಿಸಿದರು. 'ಕಲೀಕಾಲದಾಗ ಯಾಕ ಹೀಂಗs ಮಾಡಿದ್ಯೋ'

'ಕೆಲಸ ಕೈಮೀರಿತು ಏನು ಮಾಡೂದು' ಹಾಂಗಾರ ಅಲಗ ಹಾಯ್ ಬ್ಯಾಡ. ಚನ್ನಬಸವೇಶ್ವರನೆದರು ಬೇಡಿಕೊಳ್ಳುತ್ತಿದ್ದಾರೆ.

'ಕರುಣವು ಬಾರದೇನೋ ಸದಾಶಿವ ಧರಣಿ ಜನರು ಈ ಪರಿ ಮರಗೂಮ ಕಂಡು'! ಎಂದು. ಶ್ರೀ ಶರೀಫರ ಮುಖ ವಿಲಕ್ಷಣ ಕಾಂತಿಯಿಂದ ಮಿರುಗುತ್ತಿದೆ. ಜನ ಕೂತೂಹಲದಿಂದ ಅವರನ್ನೇ ನೆಟ್ಟ ನೋಟದಿಂದ ನೋಡುತ್ತಿದೆ. ತುಂಬ ಸಂತಸದಿಂದ ಮೂರ ದಿನಕ ಬರತಾಸ ಎಂದು ಹೇಳಿ ಶಿಶುನಾಳಕ್ಕೆ ಹಿಂತುರುಗಿದರು. ಮೂರನೆಯ ದಿನ ಮಳೆಯಾಗಿ ಸಂತಸ ಎಲ್ಲೆಡೆ ಸೂಸಿದೆ. ಶ್ರೀ ಹಾವಯ್ಯನವರು ವ್ರತಹಿಡಿದ ಸ್ಥಳಿತ ದಿನ್ನೆಗೆ "ಮಳೆ ಮಲ್ಲಪ್ಪನ ಗುಡ್ಡ" ಎನ್ನುತ್ತಾರೆ.

## ಕರುಣೆ ಬಾರದೇನೋ ಸದಾಶಿವ

ಕರುಣೆ ಬಾರದೇನೋ ಸದಾಶಿವ
ಕರುಣೆ ಬಾರದೇನೋ
ಧರಣಿ ಜನರೀ ಪರಿ ಮರಗೂದು ಕಂಡು

ಹುಟ್ಟಿಸಿದಲ್ಲೋ ಭೂಮಿ | ಈ ಲೋಕವ |
ಕಟ್ಟಿ ಆಳುವ ಸ್ವಾಮಿ
ಕೆಟ್ಟ ಕರ್ಮದ ಕೊಲಿ
ಸುಟ್ಟು ಕೈಲಾಸದಿ
ಪಟ್ಟನಾಳು ಪರಮಾತ್ಮ ಪ್ರಭುವರ........

ಕಡೆಗಣ್ಣಿಲೆ ನೋಡಿದ್ಯಾ | ಈ ದಕ್ಷಿಣ |
ಕಡೆ ಬಾಗಿಲ ಕಾಯ್ದ್ಯಾಳೆ
ಬಿಡದೆ ಪೊಡವಿ ಸ್ಥಳಕೆ | ಈ ಬರ ಹುಟ್ಟಿಸಿ |
ಕಡು ಹರುಷದಿ
ಸುಡುಗಾಡ ಸೇರಿದ್ಯಾ ಸಾಂಬಾ........

ತುಸು ದಯವಿರಬೇಕೋ | ಈ ಮನುಜರ |
ಹಸನಾಗಿಸಲಹುದಕೆ
ವಸುಧಿಯೊಳು ಶಿಶುನಾಳ
ಪಶುಪತಿ ಸೇವಕ
ಉಸುರಿದ ನುಡಿಗೆ ನಸುನಗೆಯಿಂದಲಿ

## ಅಪ್ಪಯ್ಯನವರ ಪಾದಾ ಕಂಡೆ | ಸ್ವಾಮಿ |

ಗುಡಗೇರಿಯ ಕುಂಬಾರ ಬಸಪ್ಪನ ಮನೆಯಲ್ಲಿ ಸಂತರ ತಂಡ ಕೂಡುತ್ತದೆ. ಲೀಲೆಯಿಂದ ಏಕದಾರಿ ಹಿಡಿದು ಹಾಡುತ್ತಾರೆ. ಭಜನೆಗೆ ಊರಿನ ಹಲವಾರು ಜನ ಭಕ್ತರು ಸೇರುತ್ತಾರೆ. ಸಂತರ ತಂಡದಲ್ಲಿ ಗುರು ಗೋವಿಂದಯತಿಗಳು, ಶರೀಫ ಶಿವಯೋಗಿಗಳು, ನವಿಲಗುಂದದ ನಾಗಲಿಂಗ ಪ್ರಭುಗಳು, ಇಚ್ಚಂಗಿ ಯಲಿವಾಳದ ನರಸಪ್ಪನವರು ಮುಖ್ಯರು. ಶಿಷ್ಯರಲ್ಲಿ ಕಡಪಟ್ಟಿಯ ಶ್ರೀಗಳಾದ ಫಕ್ಕೀರಸಾಹೇಬ ಪಿಂಜಾರ, ಕ್ಯಾಲಕೊಂಡದ ನೂರಸಾಹೇಬ ನದಾಫ, ಗುರುಪಾದಪ್ಪ ಜಾಡರ, ಇಮಾಮಸಾಹೇಬ ಹಾಜೀಸಾಹೇಬನವರ, ಫಕ್ಕೀರಪ್ಪ ಬಜಂತ್ರಿ, ಮುಖ್ಯರು ತೂರ್ಯಾವಸ್ಥೆಯಲ್ಲಿ ಹಾಡು ಹೊಳೆಯಾಗಿ ಹೊಮ್ಮುತ್ತವೆ. ಗೋವಿಂದ ಗುರುಗಳು ದೇಹಬಿಟ್ರ ನಂತರ ಶ್ರೀ ಶರೀಫರು ಆಗಾಗ ಕುಂಬಾರ ಬಸಪ್ಪನ ಮನೆಗೆ ಬರುತ್ತಾರೆ. ಹಾಡಿನಿಂದ ಭಕ್ತರನ್ನು ತಣಿಸುತ್ತಾರೆ.

ಶಿವರಾತ್ರಿ. ಸಂಜೆ ಐದು ಗಂಟೆಯ ಸುಮಾರಿಗೆ ಶ್ರೀ ಶರೀಫರು ಲೀಲೆಯಿಂದ ಕಲ್ಮಠದ ಕಡೆಗೆ ನಡೆದಿದ್ದಾರೆ. ಶ್ರೀ ಸಂಗನ ಬಸಪ್ಪ ಸ್ವಾಮಿಗಳ ದರ್ಶನಕ್ಕೆ ಕೈಯಲ್ಲಿ ಹೊತ್ತಿದ ಊದುಬತ್ತಿಯ ಕಡ್ಡಿಗಳಿವೆ. ತಮ್ಮೊಳು ತಾವು ಮಗ್ನರಾಗಿದ್ದಾರೆ. ಜ್ಞಾನಿಗಳಾದ ಸ್ವಾಮಿಗಳು ಅರಿತು ಬಾಗಿಲಲ್ಲಿ ನಿಂತಿದ್ದಾರೆ. ತಮ್ಮೆಡೆಕೆ ಬರುವ ಶ್ರೀ ಶರೀಫರನ್ನು ಕಂಡು ಆನಂದಭರಿತರಾಗಿ, ಇದೇನು ! ಈ ಕಡೆಗೆ ದಯಮಾಡಿಸಿದಿರಿ ಎನ್ನುತ್ತಾರೆ.

ಈ ದಿವಸ ಮಹಾಶಿವಯೋಗವಲ್ಲವೆ ? ಶರೀಫರ ಉತ್ತರ. ಲೀಲೆಯಿಂದ ಸ್ವಾಮಿಗಳು ಜ್ಞಾನಿಗೆ ನಿತ್ಯವೂ ಶಿವಯೋಗವಲ್ಲವೆ ? ಎನ್ನುತ್ತಾರೆ. ಶರೀಫರ ಮನ ಸಂತಸದಿಂದ ಉಕ್ಕಿತು. ಸ್ವಾಮಿಗಳಿಗೆ ವಂದಿಸಿ, ಬಗೆದುಂಬಿದ ಹಕ್ಕಿಯಂತೆ ಹಾಡುತ್ತಿದ್ದಾರೆ.

"ಅಪ್ಪಯ್ಯನವರ ಪಾದಾ ಕಂಡೆ | ಸ್ವಾಮಿ |
ಗುಡಿಪುರ ಗ್ರಾಮದೊಳೇರಿಸಿ ಜಂಡೇ" ಎಂದು.

# ಅಪ್ಪಯ್ಯನವರ ಪಾದಾ ಕಂಡೆ । ಸ್ವಾಮಿ ।

ಅಪ್ಪಯ್ಯನವರ ಪಾದಾ ಕಂಡೆ । ಸ್ವಾಮಿ ।
ಗುಡಿಪುರ ಗ್ರಾಮದೊಳೇರಿಸಿ ಜಂಡೇ
ಅಪ್ಪಯ್ಯನವರ ಪಾದಾ ಕಂಡೇ........

ಅಕ್ಕರದಿ ಆನಂದ ಭರಿತದಿ
ಸಕ್ಕರೆಯ ನೋದಿಕೆಯ ಮಾಡಿಸಿ
ಓಂಕಾರ ಪ್ರಣಮವ ನೋಡಿ, ಬಹುಕಾಲ ಭಕ್ತರು
ಕೂಡಿ ಬಸವಾದಿ ಪ್ರಮಥರು ಹಾಡಿ
ಅಂಬರಪುರ ಇಂಬು ಮಾಡಿ
ಸಾಂಬನೊರವಿಲೆ ಬೆಳಿಸ್ಯಾರೊ, ಸಾಮುಗ್ರಿಗೂಡಿ
ಹರಶರಣರು ಸವಿದಾಡಿ
ಹತ್ತು ವರ್ಷ ಆದ ಮೇಲೆ
ಸತ್ಯ ಮೆರೆದಿತು ಮಹಾತ್ಮರಲ್ಲೆ
ಗೊತ್ತು ಹಿಡಿ ಗೋವಿಂದ ರಾಜನ
ಪ್ರಣಮು ಪಂಚಾಕ್ಷರ ಧ್ಯಾನಿಸಿ ನುಡಿ
ಪರಮಾರಾಧ್ಯ ಪಂಚಾಚಾರ್ಯರ ನಡಿ, ಪಾಪವನು ಕಡಿ
ಪರಲೋಕದವರೆಲ್ಲ ಕೂಡಿ
ಪಂಚಾಗ್ನಿ ಮಠದೊಳಡಗಿಯ ಮಾಡಿ
ಅನ್ನಪ್ರಸಾದವ ನೀಡಿ, ಚೆನ್ನಬಸವೇಶ್ವರರು ಬರುತಿರೆ
ಪ್ರಮಥಗಣಂಗಳು ಕೂಡಿ
ಕಲ್ಯಾಣ ಪುರವನು ಮಾಡಿ
ಅಲ್ಲೆ ಶರಣ ಲೀಲಾಮೃತ ಪಾಡಿ
ಶಿಶುನಾಳ ಗಾಮಕ ಕೂಡಿ
ಕಲಿಕರ್ಮ ವಿಕಾರಿಗೆ ಜ್ಯಾಡಿ
ಪರಮಾತ್ಮ ಪಾರ್ವತಿ ಹಾಡಿ
ಉಳಿದವರು ಗುರುಪಾದ ಕೂಡಿ

# ಖಾದರಿ ಸದಾವರಿ

ಶ್ರೀ ಶರೀಫ ಶಿವಯೋಗಿಗಳು ಯಾರ ದೃಷ್ಟಿಗೂ ಬೀಳದ ಹಾಗೆ ಸತತವಾಗಿ ಮೂರು ವರ್ಷ ಹುಲಗೂರಿನ ಹಜರೇಶಾ ಖಾದರಲಿಂಗರ ಗದ್ದುಗೆಗೆ ನಡೆದುಕೊಂಡಿದ್ದರೆಂದು ನಂಬಿಕೆಯಿದೆ. ಉಸಿರೆಲ್ಲ ಶಿವಮಯ ವಾದ ಶರೀಫರು ತಾವು ಕೈಕೊಳ್ಳುವ ಮಹತ್ವದ ಕಾರ್ಯಗಳ ಮೊದಲಲ್ಲಿ 'ಯಾ ಖಾದರ ಯಾ ಖಾದರ' ಎಂದು ಆ ಮಹಾತ್ಮಾ ಖಾದರಲಿಂಗರ ಹೆಸರು ಸ್ಮರಿಸುತ್ತಾರೆ. ಶರೀಫರ ಸಮಕಾಲೀನ ಹಿರಿಯ ಸಿದ್ಧ ಪುರುಷರು ಪವಾಡ ಪುರುಷರೂ ಆದ ನಾಗಲಿಂಗ ಯತಿಗಳು ಶರೀಫರಿಗೆ ಕೇಳುತ್ತಾರೆ.

ಯಾರೋ ನಿನ್ನ ಖಾದರ ?<br>
ಅವ ನಮ್ಮಪ್ಪನೋ, ನಮ್ಮಪ್ಪ<br>
ನಿಮ್ಮಪ್ಪ ನನಗಿಂತ ಬಾಳ ದೊಡ್ಡವನೇನೊ

ನಿನಗಿಂತ ಎಷ್ಟೋ ಪಟ್ಟು ಆತ ದೊಡ್ಡವ. ಹಾಗಾದರೆ ನಡಿ-ನೋಡೋಣ. ಇಬ್ಬರೂ ಸಿದ್ಧ ಪುರುಷರು ಹುಲಗೂರಿನ ಹಜರೇಶಾ ಖಾದರಲಿಂಗರ ಗದ್ದುಗೆಯ ಕಡೆಗೆ ನಡೆದಿದ್ದಾರೆ. ಪಲಾಮ ಟೀಕಡಿಯ ಹತ್ತಿರ ಬರುತ್ತಿದ್ದಾರೆ ಇಬ್ಬರೂ ಉರಿ ಗಾಳಿ ನಾಗಲಿಂಗ ಯತಿಗಳನ್ನು ಮುಂದಕ್ಕೆ ಹೋಗಗೊಡದು. ಶರೀಫರು ಸಂತಸದಿಂದ ಇಗಾ, ನಮ್ಮಪ್ಪ ಅಲ್ಲಿ ನಿಂತು ಕರೆಯುತ್ತಿದ್ದಾನೆ ಎಂದು ಉನ್ಮಾದದಿಂದ ಗದ್ದುಗೆಯ ಕಡೆಗೆ ನಡೆದಿದ್ದಾರೆ. ಸಲಾಮ ಟೀಕಡಿಯ (ಸವನೂರಿನಿಂದ ಹಜರೇಶಾ ಖಾದರ ಲಿಂಗರು ಯೋಗದ ಬಲದಿಂದ ವಾಯುಮಾರ್ಗವಾಗಿ ಹೋಗುವಾಗ ರೋಡೇಶಾವಲಿಯವರು ಅವರನ್ನು ಕೆಳಗೆ ಇಳಿಸಿಕೊಂಡಾಗ,ಯಾವದಿನ್ನೆಯ ಮೇಲೆ ಆ ಮಹಾತ್ಮಾ ಮೊದಲು ಪಾದವಿಟ್ಟರೋ ಆ ಚಿಕ್ಕ ದಿನ್ನೆಗೆ ಸಲಾಮ ಟೀಕಡಿ ಎನ್ನುವರು. ಗದ್ದಿಗೆಗೆ ಹೋಗುವ ಭಕ್ತರು ಮೊದಲು ಅಲ್ಲಿ ವಂದಿಸುತ್ತಾರೆ) ಹತ್ತಿರ ನಿಂತ ನಾಗಲಿಂಗ ಗುರುಗಳು, ಶರೀಫಾ, ನಿಮ್ಮಪ್ಪ ಬಾಳ ದೊಡ್ಡವನೊ ಎಂದು ಹೇಳುತ್ತಿದ್ದಾರೆ. ಆ ಮಹಾತ್ಮ ನನ್ನು ಕಂಡು ಉಲ್ಲಾಸದಿಂದ ಶರೀಫರು ಹಾಡುತ್ತಿದ್ದಾರೆ. ಖಾದರಿ "ಸದಾ ವರಿ ನಿತ್ಯ ನಿರಂಜನಾವರಿ" ಎಂದು.

## ಖಾದರಿ ಸದಾವರಿ

ಖಾದರಿ ಸದಾವರಿ
ನಿತ್ಯ ನಿರಂಜನಾವರಿ
ಪಂಚ ಪ್ರಣಮ ಘೋಷನಾದ
ಮುಂಚೆ ಮೌನ ಖಾದರಿ
ಸಂಚಿತಾರ್ಥ ವಿಷಯ ಕರ್ಮ
ಪ್ರಪಂಚದೂರ ಖಾದರಿ
ಪದವಿದಾನು ಸದವಿದಾನು
ಪದವಿದೂರ ಖಾದರಿ
ಆದಿನಾದ ಮೋದನಾದ
ಹಮ್ಮನಳಿದ ಖಾದರಿ
ಮೇದಿನಿ ಸ್ಥಳದಿ ಶಿಶುನಾಳ
ಶಹಾದತ್ತ ಹಜರೇಶಾ ಖಾದರಿ

# ಹಮ್ ತೋ ದೇಖಾ ಮುಹಮ್ಮದ

ಶಿಶುನಾಳದ ಶ್ರೀ ಶರೀಫರನ್ನು, ಅವರು ಬದುಕಿದ್ದಾಗ, ಬೇರೆ ಬೇರೆ ಧರ್ಮದ ಜನ ಕಂಡದ್ದು ಕಲುಷಿತ ಕಣ್ಣಿನಿಂದಲೇ ಎಂದು ಹೇಳಬಹುದು. ವೀರ ಮಡಿವಂತ ಬ್ರಾಹ್ಮಣ, ವೀರಶೈವ ಜನಗಳು, " ಇವ ಮುಸಲ್ಮಾನ " ಎಂಬ ಸಂಕುಚಿತ ದೃಷ್ಟಿಕೋನದಿಂದ ನೋಡಿದರು. ಮಠ, ಮಂದಿರ-ಗಳಲ್ಲಿ ಅವರಿಗೆ ಪ್ರವೇಶ ಬಹಿಷ್ಕರಿಸಿದರು. ಅವನೊಬ್ಬ ಕುಡುಕ, ಗಾಂಜಿ ಸಿಶ್ಯಾಳಿ ಎಂದು ತಿರಸ್ಕರಿಸಿದರು. ತುಚ್ಛವಾಗಿ ಪರಿಗಣಿಸಿದರು. ಇನ್ನು ಸ್ವಜಾತಿ ಬಾಂಧವರಾದ ಮುಹಮ್ಮದೀಯರು ಶ್ರೀ ಶರೀಫರನ್ನು ಬೇರೊಂದು ಕಣ್ಣಿನಿಂದ ಕಂಡರು. ಅವ ಮುಸಲ್ಮಾನನಾಗಿ ಮಸೀದೆಗೆ ಬಂದಿಲ್ಲ. ನಮಾಜ ಮಾಡಿಲ್ಲ. ಮುಸಲ್ಮಾನರನ್ನೇ ಕಟುವಾಗಿ ಟೀಕಿಸುತ್ತಾನೆ. ಅಲ್ಲದೆ ಅವನೊಬ್ಬ ಇಸ್ಲಾಮರ ಕಡೆಗಿರದೆ ವೀರಶೈವದೆಡೆಗಿದೆ. ಹಿಂದು ದೇವರುಗಳೇ ಅವನ ದೇವರು, ಹಿಂದುಗಳೇ ಅವನ ಒಡನಾಡಿಗಳು ಎಂದು ಮುಂತಾಗಿ ಆರೋಪಿಸಿ ಮುಹಮ್ಮದೀಯ ಧರ್ಮದಿಂದ ದೂರಿಟ್ಟರು. ಮಸೀದೆಗೆ ಬರಗೊಡಲಿಲ್ಲ. ಅವರು ಬದುಕಿರುವಷ್ಟು ಕಾಲ ಜನತೆ ಶರೀಫರನ್ನು ವಿಶಿಷ್ಟವಾದ ಮತಧರ್ಮದ ಕಣ್ಣಿನಿಂದಲೇ ಕಂಡರು. ಅವರ ಹಿರಿಮೆ ಏನು ? ಧರ್ಮ ಜೀವನಕ್ಕೆ ಅವರ ಕೊಡುಗೆ ಏನು ? ಎಲ್ಲ ಧರ್ಮಗಳ ಸತ್ವವನ್ನು ಸವಿದು, ಎಲ್ಲ ಧರ್ಮಗಳನ್ನು ಮೀರಿ ವಿಶ್ವಾತ್ಮಕ ಧರ್ಮದೆತ್ತ-ರಕ್ಕೆ ಏರಿ ನಿಂತ ಮಹಾತ್ಮ ಅವರೆಂದು ಜನತೆ ಅರಿಯದೆ ಹೋಯಿತು. ಎದೆಯ ಗೂಡಿನಲ್ಲಿ ಅರುಹಿನ ದೀಪ ಹಚ್ಚಿ, ಮನುಷ್ಯತ್ವದಿಂದ ಮಹಾ-ದೇವತ್ವದೆಡೆಗೆ ಜನತೆಯನ್ನು ಕೊಂಡೊಯ್ಯಲು ಬಂದ ಶರಣ ಎಂದು ತಿಳಿಯದೆ ಹೋಯಿತು. ಲಕ್ಷ್ಮೇಶ್ವರದ ಆಸಾರ ಮಹಲದಲ್ಲಿ ಈದೇ ಮಿಲಾದ ಹಬ್ಬದ ಕಾಲಕ್ಕೆ ಕರ್ಮಠ ಮುಹಮ್ಮದೀಯ ಜನ ಶರೀಫರನ್ನು ಒಳಗೆ ಬಿಡದೆ, ನೀನು ಕಾಫೀರ ಎಂದು ಮೂದಲಿಸಿತಂತೆ. ಪ್ರವೇಶ ಬಹಿಷ್ಕರಿದಾಗ ಅಂಗಳದಲ್ಲಿ ನಿಂತು ಹಾಡುತ್ತಿದ್ದಾರೆ "ಹಮ್ ತೋ ದೇಖಾ ಮುಹಮ್ಮದ

ನೂರೆ ಗಂಬರ್" ಉಳಿದವರಿಗೆ ಹಜರತ್ ಮುಹಮ್ಮದ ಪೈಗಂಬರರ ಕೇಶ ಕಾಣುತ್ತಿದ್ದರೆ, ಶರೀಫರಿಗೆ ರತ್ನಪ್ರಭೆಯ ಬೆಳಕಿನಲ್ಲಿ ಪೈಗಂಬರರೇ

ತೋರುತ್ತಿದ್ದಾರೆ. ಆ ದೇವ ಸಂತುಷ್ಟಗೊಂಡಿದ್ದಾನೆ. ಸಂತಸದಿಂದ ಹಾಡು ಹೊಳೆಯಾಗಿ ಹರಿಯುತ್ತಿದೆ. ಕೇಳಿದ ಲೋಕದ ಮೈರಕ್ತ ಮರಗಟ್ಟಿದಂತಿದೆ. ಮೈಯೆಲ್ಲ ಕಿವಿಯಾಗಿ ಕೇಳಿದ ಜನ ನಿಂತಲ್ಲಿಂದ ಕದಲದೆ ನಿಂತಿದೆ. ಆವುದೋ ದೈವೀ ಉನ್ಮಾದ ವಾತಾವರಣದಲ್ಲಿ ಹರಡಿದೆ. ಆ ದೇವನಿಗೆ ಮಣಿದು ಶರೀಫರು ಉಲ್ಲಸಿತರಾಗಿ ಹೊರಬರುತ್ತಿದ್ದಾರೆ. ಅಪೂರ್ವ ಕಾಂತಿ ಮೈಯಾವರಿಸಿದೆ.

## ಹಮ್ ತೋ ದೇಖಾ ಮುಹಮ್ಮದ

ಹಮ್ ತೊ ದೇಖಾ ಮುಹಮ್ಮದ
ನೂರೆ ಗಂವರ್
ರಮ್ತೇ ಜಾಕರ್ ಆತಶೆ ತವಾಫ್ ಕರ್

ಚಾರ ಅನಾಸಿರ್
ಘರ್ ಪುಕಾರೆ
ಮೂರದಿಯೆ ಮಾಯೇಕಿ ಅಸರ್

ರೋಜಾ ನಮಾಜಿ
ರಬ್ಬನಾ ರಾಜೀ
ವಾಜಿ ಬತ್ಕೇ ಜಮೀ ಪದರ್ ಕುಸರ್

ಶರೀಯತ್ಮೇ ಇಸ್ಲಾಮಕೆ ದರಿಯಾ
ಉಸ್ಮೇ ರೋಶನ್ ಶಿಶುನಾಳ ಸದರ್

# ಮೋಹದ ಹೆಂಡತಿ ಸತ್ತ ಬಳಿಕ

ಕುಂದಗೋಳದ 'ನಾಯಕ' ಮನೆತನದ ಶ್ರೀ ಫಕ್ಕೀರ ಸಾಹೇಬರ ಪತ್ನಿ ಶ್ರೀಮತಿ ಪೀರಸಾಬಿ. ಪುಣ್ಯವಂತ ದಂಪತಿಗಳು. ಅವರಿಗೆ ಮೂವರು ಹೆಣ್ಣುಮಕ್ಕಳು. ತಾಯಿ ಫಾತಿಮಾ, ರಾಬಿಯಾ, ಹೈದರಬು. ಒಬ್ಬ ಮಗ ಹೆಸರು ಅಲ್ಲಿಸಾಹೇಬ. ಜನ ಅಲ್ಲೀ ನಾಯಕ ಎಂದೇ ಕರೆಯುವದು. ತಾಯಿ ಫಾತಿಮಾ ಅವರೇ ದೊಡ್ಡವರು. ಫಕ್ಕೀರ ಸಾಹೇಬರು ತಾಯಿ ಫಾತಿಮಾರನ್ನು ಗುರು ಶರೀಫರಿಗೆ ಕುಂದಗೋಳದಲ್ಲಿ ಧಾರೆಯೆರೆದು ಕೊಟ್ಟಿದ್ದರು. ಶರೀಫರಿಗೆ ಮಗಳೊಬ್ಬಳಿದ್ದಳೆಂದು ನಂಬಿಕೆಯಿದೆ. ಒಮ್ಮೆ ನಾಗಲಿಂಗ ಯತಿಗಳು ಶರೀಫರ ಕೈಯಲ್ಲಿಯ ಕೋಲನ್ನು ಕಸಿದು ಬೀಸಿದಾಗ, "ಇದ್ದೊಂದು ಮಗಳಿತ್ತು, ಅದು ಹೋಯ್ತು ಬಿಡು" ಎಂದರಂತೆ. ಮಗಳು ಕಾಲರಾದಲ್ಲಿ ಮಡಿದಳೆಂದು ಹೇಳುತ್ತಾರೆ. ಕಾಲರಾ ಹಬ್ಬಿದೆ. ಎಷ್ಟು ಆಹುತಿ ತೆಗೆದುಕೊಂಡರೂ ಮೃತ್ಯುವಿಗೆ ತೃಪ್ತಿಯಿಲ್ಲ. ಶಿಶುನಾಳದಲ್ಲಿ ತಾಯಿ ಫಾತಿಮಾ ಪರಮಾತ್ಮನ ಪಾದ ಸೇರಿದ್ದಾಳೆ. ನಾಗಲಿಂಗಪ್ಪನವರು ಶರೀಫರು ಕುಂದಗೋಳದಲ್ಲಿದ್ದಾರೆ. ನಾಗಲಿಂಗ ಯತಿಗಳು ಶರೀಫರ ತಲೆಯ ಮೇಲಿನ ರೂಮಾಲನ್ನು ಕೆಡವಿದಾಗ, ಬಿಡು, ಬಿಡೋ, ಹೇಣ್ತಿ ಸತ್ತಿದ್ದೇನು ನನಗೆ ಗೊತ್ತಿಲ್ಲೇನು ? "ಈಗ ನಾ ಇಗಾ ಪರಂಜ್ಯಾಳ ಆದೆ. ನಿಮ್ಮಪ್ಪ ಆದೆ" ಎನ್ನುತ್ತಾರೆ. ಶಿಶುನಾಳದಿಂದ ಆಳೊಬ್ಬ ಸಾವಿನ ಸಮಾಚಾರ ಹೊತ್ತು ತಂದಿದ್ದಾನೆ. ಶರೀಫರನ್ನು ಕಂಡು ದುಃಖದಿಂದ 'ಯಪ್ಪಾ' ಎಂದು ಕೆಳಮುಖ ಮಾಡಿ ಕಂಬನಿ ಕರೆಯುತ್ತಿದ್ದಾನೆ. ಹೇಳಲು ಆತನಿಗೆ ಬಾಯಿ ಬಾರದು. ಶರೀಫರೇ ಹೇಳುತ್ತಿದ್ದಾರೆ: "ಬಿಡಲೇ, ನಿನ್ನೆ ಹೋಗಾಗ, ಹೋಗತೀನಿ ಅಂತ ಹೇಳಿ ಹೋಗ್ಯಾಳ. ಈಗ ಬಂದಿಯಲಲೇ ಹುಚ್ಚಾ !" ನಾಗಲಿಂಗ ಯತಿಗಳು ಶರೀಫಾ, ನಿಮ್ಮ ಅತ್ತಿ ಮಾವರಿಗೆ ಎಷ್ಟು ದುಃಖಾಗಿರಬ್ಯಾಡ. ಮನಿಗಿ ಹೋಗ ನಡಿ ಎಂದರೆ ಲೀಲೆಯಿಂದ ಹಾಡುತ್ತಿದ್ದಾರೆ.

"ಮೋಹದ ಹೆಂಡತಿ ಸತ್ತ ಬಳಿಕ ಮಾವನ ಮನೆಯು ಹಂಗಿನ್ಯಾಕೊ'

ಎಂದು ಶಿಶುನಾಳದಲ್ಲಿಯೂ ಅವರಿಲ್ಲ. ಹತ್ತು ದಿನಗಳ ವರೆಗೆ ಅವರ ಸುಳಿವೇ ಇಲ್ಲ. ಅಲ್ಲಿಯ ವರೆಗೆ ಅಂಟಿಕೊಂಡು ಬಂದ ಮೋಹದ ಕೊಂಡಿ ಕಳಚಿತು.

# ಮೋಹದ ಹೆಂಡತಿ ಸತ್ತ ಬಳಿಕ

ಮೋಹದ ಹೆಂಡತಿ ಸತ್ತ ಬಳಿಕ
ಮಾವನ ಮನೆಯ ಹಂಗಿನ್ನ್ಯಾಕೋ
ಸಾವು ನೋವಿಗೆ ತರುವ ಬೀಗನ
ಮಾತಿನ ಹಂಗೊಂದೆನಗ್ಯಾಕೋ

ಖಂಡವನದಿ ಸೋಂಕಿ ತನ್ನ ಮೈಯೊಳು ತಾಕಿ
ಭಂಡೆದ್ದು ಹೋಗುವದು ಭಯವ್ಯಾಕೋ
ಮಂಡಲ ನಾಡಿಗೆ ಪಿಂಡದ ಗೂಡಿಗೆ
ಚಂಡಿತನದಿ ಚರಿಸ್ಯಾಡುವದ್ಯಾಕೋ

ತಂದೆ ಗುರುಗೋವಿಂದನ ಸೇವಕ
ಕುಂದಗೋಳಕೆ ಬಂದು ನಿಂತನ್ಯಾಕೋ
ಬಂಧುರ ಶಿಶುನಾಳಧೀಶನ ದಯದಿಂದ
ಇಂದಿಗೆ ವಿಷಯದ ವ್ಯಸನಗಳ್ಯಾಕೋ,

# ಶ್ರೀ ಶಿಶುನಾಳ ಶರೀಫ ಸಾಹೇಬರು

## ಕವಿ, ಕಾವ್ಯ ಪರಿಚಯ

### ಭಾರತದ ಪರಂಪರೆಗಳು

ಭಾರತವು ಸಿದ್ಧಪುರುಷರ ನಾಡು. ಇಲ್ಲಿ ಅನಾದಿಕಾಲದಿಂದಲೂ ಋಷಿಗಳು, ಮುನಿಗಳು, ಯೋಗಿಗಳು, ತ್ಯಾಗಿಗಳು, ದಿವ್ಯ ವ್ಯಕ್ತಿಗಳು, ಜೀವನ್ಮುಕ್ತರು, ಬಾಳಿ ಬದುಕಿ, ತತ್ವ ಸತ್ವಗಳನ್ನು ತೋರಿ ಈ ನೆಲ ಜಲ ಗಳನ್ನೆಲ್ಲ ಪವಿತ್ರ ಪಾವನಗೊಳಿಸಿದ್ದುಂಟು. ಕಾಲ ಕಾಲಕ್ಕೆ ಮಾನವ ಕುಲ ಕೋಟಿಯನ್ನು ಉದ್ಧರಿಸಲಿಕ್ಕೆಂದು ಕಾರುಣಿಕರು ಹುಟ್ಟಿ ಬರುತ್ತಾ ರೆಂಬುದು ನಮ್ಮ ಪರಂಪರೆಯಾಗಿದೆ. ಈ ಮಹಿಮರು ಕಾಲಕಾಲಕ್ಕೆ ಬೋಧಿಸಿದ ಸತ್ವ ಸಿದ್ಧಾಂತಗಳು ನಮ್ಮ ಶಾಶ್ವತ ಭಾಂಡಾರಗಳಾಗಿವೆ. ಬಿಟ್ಟು ಹೋದ ಈ ದೈವೀ ಸಂಗ್ರಹಾಲಯಗಳಿಂದಲೇ ನಮ್ಮ ಭರತ ಭೂಮಿಯು ಮಹಾ ಪ್ರಪಂಚದಲ್ಲಿಯೇ ಮಾನವ ಜನಾಂಗದ ತೊಟ್ಟಿಲ ವೆಂದೂ ಪ್ರತೀತಿಗೊಂಡಿದೆ. ಪ್ರೋಫೇಸರ ಮ್ಯಾಕ್‌ಮುಲರ, ಇಲಾಯಾ ಇಹರೆಂಬರ್ಗರಂತಹ ವಿದೇಶಗಳಲ್ಲಿಯ ತತ್ವಜ್ಞಾನಿಗಳು, "ಪ್ರಾಚೀನ ಜನಾಂಗಗಳಾದ ಗ್ರೀಕ, ರೋಮ, ಸೆಮಿಟಿಕ್, ಜ್ಯೂಜು ತತ್ವಗಳಿಗಿಂತಲೂ ಭಾರತದ ಸಂಚಿತ ದಿವ್ಯ ಅನುಭವಗಳಿಂದ ಮಾನವನ ಕುಟುಂಬವು ಸಮಗ್ರ ಪೂರ್ಣತೆಯನ್ನು ಪಡೆದು ಋಣಿಯಾಗಿದೆಂದೂ" ಮತ್ತು("India is a Temple of Humanity") "ಭಾರತವು ಮಾನವಕುಲದ ಮಂದಿರವಾಗಿ ದೆಂದೂ" ಹೊಗಳುತ್ತಿದ್ದಾರೆ. ಇದಕ್ಕೆ ನಮ್ಮ ನಾಡಿನಲ್ಲಿ ಹುಟ್ಟಿ ಬೆಳೆದು ಮಹಿಮೆ ತೋರಿ ಬೆಳಗಿ ಹೋದ ಸಿದ್ಧರು ಋಷಿಗಳು, ತಪಸ್ವಿಗಳು, ಇವರೇ ಕಾರಣರಾಗಿದ್ದಾರೆ. ಇದನ್ನೇ ಮಹರ್ಷಿ ಅರವಿಂದರ ಶಬ್ದಗಳಲ್ಲಿ ಹೇಳುವ ದಾದರೆ. **"The Hero, the Rihsi, thc Saint are the natural fruits of our Indian Soil and there has been no age in which they have**

not been born" (ಸಾಧುಗಳು ಸಿದ್ಧರು, ವೀರರು ಭರತ ಭೂಮಿಯ ಪುಣ್ಯ ಫಲಗಳಾಗಿದ್ದಾರೆ. ಅವರು ಹುಟ್ಟ ಬಾರದಂತಹ ಯುಗವೇ ಇರುವದಿಲ್ಲ.) ಇಂತಹ ಪುಣ್ಯಪುರುಷರಲ್ಲಿ ಶಿಶುನಾಳ ಶರೀಫ ಸಾಹೇಬರೂ ಒಬ್ಬರಿದ್ದಾರೆ.

ಬಾಲ್ಯ ಜೀವನ

ಶಿಶುನಾಳ ಶರೀಫ ಸಾಹೇಬರು೧೯ನೆಯ ಶತಮಾನದಲ್ಲಿ ಆಗಿ ಹೋದ ಶರಣರಲ್ಲಿ ಶ್ರೇಷ್ಠರು. ಮಹಿಮಾಪುರುಷರೆಂದೂ, ದಿವ್ಯ ಮಾನವರೆಂದೂ, ಜೀವನ್ಮುಕ್ತರೆಂದೂ, ಪ್ರತೀತಿಗೊಂಡಿದ್ದಾರೆ. ಶಿಶುನಾಳ ಗ್ರಾಮವು ಉತ್ತರ ಕರ್ನಾಟಕದ ಧಾರವಾಡ ಜಿಲ್ಹೆಯ ಸಿಗ್ಗಾಂವಿ ತಾಲೂಕಿನ ಒಂದು ಚಿಕ್ಕ ಗಾತ್ರದ ಹಳ್ಳಿ. ಗುಡಗೇರಿ ರೇಲ ನಿಲ್ದಾಣದಿಂದ ೩-೪ ಮೈಲು ಅಂತರದಲ್ಲಿದೆ. ಈ ಗ್ರಾಮದ ಸಾತ್ವಿಕ ಮುಸಲ್ಮಾನ ಕುಟುಂಬವೊಂದರಲ್ಲಿ ಶರೀಫರ್ ಕ್ರಿ. ಶ. ೧೮೧೯ ಮಾರ್ಚ ೭ನೆಯ ದಿನಾಂಕಿನ ದಿವಸ ಜನ್ಮವೆತ್ತಿದರು. ಇವರ ಪೂರ್ಣ ಹೆಸರು ಮಹಮ್ಮದ ಶರೀಫರು. ಇವರ ತಂದೆ ಹಜರತ ಇಮಾಮ ಸಾಹೇಬರು ಬಡವರು. ಕೃಷಿಕರ್ಮದಿಂದಲೂ ಮತ್ತು ಸಮಾಜ ಸೇವೆಯಿಂದಲೂ ಉದರ ಪೋಷಣೆಯನ್ನು ಸಾಗಿಸುತ್ತಿದ್ದರು. ಹಜರತ ಇಮಾಮಸಾಹೇಬರು ಅಲ್ಲಾನಭಕ್ತರು. ಹುಲಗೂರ ಖಾದರಶಾ ಸಾಧುಗಳಿಗೆ ಅನನ್ಯ ಭಾವದಿಂದ ನಡಕೊಳ್ಳುತ್ತಿದ್ದರು. ಖಾದರಶಾ ಇವರ ಆಶೀರ್ವಾದ-ದಿಂದಲೇ ಮಹಮ್ಮದ ಶರೀಫರ ಜನನ ಫಲವಾಗಿದೆ. ಶರೀಫರ ಬಾಲ್ಯವು ಶಿಶುನಾಳ ಗ್ರಾಮದಲ್ಲಿಯೇ ನಡೆದು ಹೋಯಿತು. ಕನ್ನಡ ಮುಲ್ಕೀ ಪರೀಕ್ಷೆಯ ವರೆಗೆ ಅಧ್ಯಯನ ಮಾಡಿದರು. ಉರ್ದು, ಮೋಡಿ ಬಳಿಕೆಯ ಮಟ್ಟಿಗೆ ರೂಢಿಯಿಂದ ಕಲಿತರು. ಚಿಕ್ಕಂದಿನಲ್ಲಿಯೇ ಸಾಧು ಸತ್ಪುರುಷರ ಸಂಗಾತಿ ಪೂಜೆ ಕೀರ್ತನಗಳಲ್ಲಿ ಮನಸ್ಸು ಇದ್ದಿತು. ರಾಮಾಯಣ ಮಹಾ ಭಾರತ, ಅಲ್ಲಮ, ಮಾಯೆ ಮುಂತಾದ ಬಯಲುಆಟಗಳಲ್ಲಿ ಪಾತ್ರವಹಿಸುತ್ತಿದ್ದರು. ಜಾತ್ರೆ ಮೌಜುಗಳಲ್ಲಿ ಸರ್ವಜ್ಞ, ಸಪ್ಪಣ್ಣಪ್ಪ(ಸರ್ಪಭೂಷಣಕವಿಗಳು) ಶಿವಶರಣರ ಕಾವ್ಯಗಾಯನಗಳಲ್ಲಿಯೂ ಮತ್ತು ಜಾತಿಗೇರರಂತಹ ವೇಷ-ಭೂಷಣ ಸೋಗುಗಳಲ್ಲಿಯೂ ಭಾಗವಹಿಸಿ ಜನತೆಯನ್ನು ಭಕ್ತಿರಸದತ್ತ

ಆಕರ್ಷಿಸುತ್ತಿದ್ದರು. ಮೊಹರಮ್ಮ, ಅಲಾವಿ, ಕರ್ಬಲಾ ಮೇಳಗಳಿಗೆ ಚಿಕ್ಕವ ರಿರುವಾಗಲೇ ಪದ ಬರೆದುಕೊಡುತ್ತಿದ್ದರು. ಹಾಗೂ ಹಾಡು ಮಜಲುಗಳಲ್ಲಿ ಹಿಮ್ಮೇಳದ ಸಜ್ಜಿಕೆಯನ್ನು ಪೂರೈಸುತ್ತಿದ್ದರು. ಹೀಗೆಲ್ಲಾ ಭಕ್ತಿ ಜ್ಞಾನ ದಾಸೋಹ ಕಾರ್ಯ ಚಟುವಟಿಕೆಗಳಲ್ಲಿ ಆಸಕ್ತಿಯಿತ್ತಲ್ಲದೆ ಮುಂದಾಳು ಗಳಾಗಿ ಕೆಲಸ ಮಾಡುತ್ತಿದ್ದರು. ವ್ರತ-ಮೌನ-ಪೂಜೆ-ಅನುಷ್ಠಾನಗಳ-ಲ್ಲಿಯೂ, ಹಳೆಯ ದೇವ-ದೇಗುಲ, ಸಾಧು-ಸನ್ಯಾಸಿಗಳನ್ನು ಹುಡುಕು-ತ್ತಲೂ, ಅವರ; ಪರಿವಾರದಲ್ಲಿ ಸೇರಿ ಯೋಗ-ಯಜ್ಞ, ಪ್ರಾರ್ಥನೆ-ಭಜನೆ ಗಳಲ್ಲಿಯೂ ವೇಳೆಗಳೆಯುತ್ತಿದ್ದರು. ಆರಂಭದಲ್ಲಿ ಇವರು ಕೆಲಕಾಲ ಹಳ್ಳಿಯ ಶಾಲೆಯೊಂದರಲ್ಲಿ ಅಧ್ಯಾಪಕರಾಗಿದ್ದರು. ಆದರೆ ಈ ವೃತ್ತಿಯು ಬಹುದಿನಗಳ ವರೆಗೆ ನಡೆಯಲಿಲ್ಲ. ಯಾಕೆಂದರೆ ಇವರ ಮನಸ್ಸಿನ ಗತಿಯೇ ಬೇರೆ ತರಹ ದ್ದಾಗಿತ್ತು. ಆದರೆ ತಮ್ಮ ಮನೆಯ ಮಗ್ಗಲು ಒಂದು ಕಟ್ಟೆಯ ಮೇಲೆ ಆಧ್ಯಾತ್ಮ ಸುಭೋದ-ಧರ್ಮ-ನೀತಿ ಮಾತುಗಳನ್ನು ಭೋಧಿಸುವ ರೂಡಿ ಯನ್ನಿಟ್ಟುಕೊಂಡಿದ್ದಳು. ಈಗಲೂ ಈ ಬೋಧ ಪೀಠವು ನೋಡಲಿಕ್ಕೆ ಸಿಗುತ್ತದೆ. ಮತ್ತು ಪೂಜಿಸಲ್ಪಡುತ್ತದೆ.

### ಗುರು ಹಾಗು ಸಾಕ್ಷಾತ್ಕಾರಗಳು

"ಗುರುವಿನ ಗುಲಾಮನಾಗುವತನಕ
ದೊರೆಯುದಣ್ಣ ಮುಕುತಿ''
ಮತ್ತು
ಹರಪಥವನರಿವಡೆ ಗುರುಪಥವೇ ಮೊದಲು''

ಎಂದು ದಾಸರು, ವಚನಕಾರರು ಅನುಭಾವ ಮಾರ್ಗದ ಪ್ರಥಮ ಹೆಜ್ಜೆಯಲ್ಲಿ ಗುರುವಿನ ವಿಶೇಷ ಸ್ಥಾನವನ್ನು ಮೀಸಲಿಟ್ಟಿದ್ದಾರೆ. ಭಾರತೀಯ ಆಧ್ಯಾತ್ಮ ಮಾರ್ಗದಲ್ಲಿ ಗುರು ಮತ್ತು ಸಾಕ್ಷಾತ್ಕಾರಗಳು ಅತ್ಯಂತ ಮಹತ್ವದ ಹೆಜ್ಜೆ ಗಳಾಗಿವೆ. ಜಡಜೀವನದಿಂದ ಸೂಕ್ಷ್ಮ ಜೀವನಕ್ಕೆ ಪರಿವರ್ತನ ಹೊಂದುವ ದಕ್ಕೆ ಗುರುವುಬೇಕು. ಈ ಗುರು-ಶಿಷ್ಯ ಭಾವದಲ್ಲಿ ಸಾಕ್ಷಾತ್ಕಾರ ಮತ್ತು ದೀಕ್ಷೆಗಳು ಜರುಗುತ್ತಿರುವದು ರೂಢಿ. ಇಂತಹ ದೈವಜ್ಞ ಘಟನೆಯು ಶರೀಫರ ಜೀವನದಲ್ಲಿ ನಡೆದುಹೋಯಿತು ಶಿಶುವಿನಾಳಧೀಶನ ಪ್ರೇರಣೆಯಿಂದ

ನೈವೀ ವಾಣಿಯು ಹೊರಹೊಮ್ಮಿತು. ಗುರು ಗೋವಿಂದರ ಬಗ್ಗೆ ನಿರ್ದೇಶನ ವಾಯಿತು.

"ಶಿಶುನಾಳಧೀಶ ಪ್ರಕಾಶ ಗೋವಿಂದನ
ಅಸಮತೇಜೋ ರೂಪ ಕಿರಣದೊಳಗೆ ಬಂದು ।
ದೊರಕಿದಾ ಗುರು ದೊರಕಿದಾ''—

ಹೀಗೆ ಹಾಡಿದ್ದಾರೆ. ಶಿಶುನಾಳಧೀಶನ ಪೂಜಾ ಫಲದಿಂದಲೇ ಗುರು ಮತ್ತು ಗುರೂಪದೇಶಗಳು ದೊರಕಿದವು.

"ನನ್ನೊಳಗ ನಾನೇ ತಿಳಕೊಂಡೇ ।
ಎನಗ ಬೇಕಾದ ಗಂಡನ ಮಾಡಿಕೊಂಡೇ ।
ಗುರೂಪದೇಶ ಪಡಕೊಂಡೇ ।
ಗುರು ಗೋವಿಂದನ ಪಾದಾ ಹಿಡಕೊಂಡೇ ॥ ''
ಸದ್ಗುರು ನಿನ್ನ ಮಾಯಕ್ಕೆ ಮರುಳಾದೆನೋ ॥ ಪ ॥
ಗುರು ಗೋವಿಂದ ಪರಮ ಗಾರುಡಿಗ ನೀ
ನಿರುತಿಹೆ ತಿಳಿಯದು । ನರರಿಗೆ ಪರಿಯಿದು''

ಹೀಗೆ ಗುರುವಿನ ಮಹಿಮೆ ಮಹತಿಯನ್ನು ಮನವಾರೆ ಹೊಗಳಿದ್ದಾರೆ. ಹಾಡು ಹಾಡಿಗೂ, ಹೆಜ್ಜೆ ಹೆಜ್ಜೆಗೂ ಗುರುಧ್ಯಾನ ಮಾಡಿದ್ದಾರೆ. ಈ ಪೂಜ್ಯ ಮೂರ್ತಿಯೇ ಗುರು ಗೋವಿಂದರು. ಇವರು ಕಳಸ ಗ್ರಾಮದ ಭಟ್ಟರ ಮನೆತನದವರು, ಕುಲದಲ್ಲಿ ಬ್ರಾಹ್ಮಣರು. ನಿಲುವಿಕೆಯಲ್ಲಿ ಎತ್ತರ; ಬಣ್ಣ ಕೆಂಪು; ಬಲಿಷ್ಠ ಚರಮೂರ್ತಿಗಳಾಗಿದ್ದರು. ಕೈಯಲ್ಲಿ ಒಂದು ತಾಮ್ರದ ತಂಬಿಗೆ, ಹೆಗಲ ಮೇಲೆ ಪಂಜೆ, ನಡುವಿನಲ್ಲಿ ಒಂದು ಲಂಗೋಟಿ, ನಗೆ ಮುಖದ ಪ್ರಸಾದವಾಣಿಯ ದಿವ್ಯ ವ್ಯಕ್ತಿಗಳಾಗಿದ್ದರು. ಗುರು ಗೋವಿಂದ ಭಟ್ಟರು ಪ್ರಾಪಂಚಿಕರು. ಅನೇಕ ಪವಾಡಗಳನ್ನು ಮಾಡಿದ್ದಾರೆಂದೂ ತಿಳಿಯುತ್ತದೆ. ಈ ಗುರು-ಶಿಷ್ಯರಿಬ್ಬರು ವಿಶೇಷವಾಗಿ ಕೂಡಿಕೊಂಡೇ ಇರುತ್ತಿದ್ದರು. ಗುಡಿಗೇರಿಯ ಕುಂಬಾರ ಮುದಕಪ್ಪನ ಮನೆಗೆ ವಿಶೇಷವಾಗಿ ಬರುವದೂ,

ಇರುವದೂ ಊಟ ಉಪಚಾರ ಇತ್ಯಾದಿ ಪೂರೈಸಿಕೊಳ್ಳುವ ರೂಢಿ ಇಟ್ಟು ಕೊಂಡಿದ್ದರು. ಈ ಮುದಕಪ್ಪನೇ ಶರೀಫರು ಹಾಡಿದ ಹಾಡುಗಳನ್ನು ಬರೆದುಕೊಳ್ಳುತ್ತಿದ್ದನು. ಶರೀಫರು ವಿಶೇಷವಾಗಿ ಆನಂದ ಲಹರಿಯಲ್ಲಿ ನಾದಬ್ರಹ್ಮನಲ್ಲಿ ಏಕಾಗಿ ದೇವೋನ್ಮಾದದಲ್ಲಿ ಮೈಮರೆತು ಹಾಡುತ್ತಿರುವದು ಗುಂಗಾಗಿದ್ದಿತು. ಈ ಅಂತರಂಗ ಪ್ರಭೆಯು ನಿಲುವುಟ್ಟು ಭಾವಭರಿತವಾಗಿ ಹೃದಯದಿಂದ ಹೊರಹೊಮ್ಮಿದ ಭಾಷೆಯೇ ಶಿಶುನಾಳಧೀಶನ ಭಾಷೆಯಾಗಿ ದ್ದಿತು. ಮನಸ್ಥಲ ಭಾವಸ್ಥಲಗಳು ಬೆಸುಗೆಯಾಗಿ, ತನ್ನ ಪ್ರಭುವಿನಲ್ಲಿ ಸರ್ವಾರ್ಪಣ ಭಾವದಿಂದ ಶರಣು ಶರಣಾಗಿದ್ದಾಗ ಈ ಕಾವ್ಯಗಂಗೆಯು ಪುಟಗೊಳ್ಳುತ್ತಿದ್ದಿತು. ಈ ಪ್ರಸಂಗ ಸಾಧಿಸಿಕೊಂಡು ಕುಂಬಾರ ಮದಕಪ್ಪ ತನ್ನ ಮೊಂಡ ಮುರುಕು ಗಲಗಿನಿಂದ ಗೀಚಿಟ್ಟುಕೊಳ್ಳುತ್ತಿದ್ದನು. ಈ ಮುದಕಪ್ಪನಿಗೆ ಒಬ್ಬಾಕೆ ಮಗಳಿದ್ದಳು. ಈಕೆಯ ಹೆಸರು ಬಸಮ್ಮ; ಚಿಕ್ಕ ಹಸುಳೆ; ಈಕೆ ಶರೀಫರಿಗೆ ಆಟದ ಗೊಂಬೆ, ನೀರು-ನಿಡಿ, ತಂಬಾಕ-ಚಿಲುಮೆ ಕೊಡುವದು, ಮುಂತಾದ ಆತಿಥ್ಯ ಮಾಡುವವಳೇ ಆಗಿದ್ದಳು. ಶರೀಫರಿಗೆ ದಿವ್ಯ ಸ್ಫೂರ್ತಿ ಬಂದಾಗೆಲ್ಲ ಕಾವ್ಯ ಪ್ರತಿಭೆ ಹೊರಹೊಮ್ಮಿದಾಗ "ಏಗುಂಡೀ ಬಾ ಇಲ್ಲಿ ಕೇಳು, ಇದನ್ನು ಹಾಡಿ ತೋರಿಸು" ಎಂದು ಅನ್ನುತ್ತಿದ್ದರೆಂದು ಈಗಲೂ ಬದುಕಿರುವ ಈ ೯೦ ವರ್ಷ ವಯಸ್ಸಿನ ಬಸಮ್ಮ ಆ ಚಿತ್ರ ಹೇಳುವ ಸಾಕ್ಷಿಯಾಗಿರುವಳು. ಈಕೆ ನಿರಕ್ಷರಿ, ಶಾಲೆಗೆ ಹೊದವಳಲ್ಲ. ಅಂದು ಆ ಶರಣನು ಹಾಡಿದ ಎಲ್ಲ ಹಾಡುಗಳನ್ನು ಚಾಚೂ ತಪ್ಪದಂತೆ ಶಬ್ದೋಚ್ಚಾರ, ವಾಕ್ಯ ಜೋಡಣೆ,ಹಾಡಿನ ಅರ್ಥ ಗಾಂಭೀರ್ಯ, ಹಾಗೂ ಹಾಡಿನ ಹಿಂದಣ ಸನ್ನಿವೇಶಗಳನ್ನು ಆ ರಭಸದಲ್ಲಿಯೇ ಹೇಳುತ್ತಾಳೆ. ಈಕೆ ಯನ್ನು ಕಾಣುವದರಿಂದ ಶರೀಫಸಾಹೇಬರ ನೈಜ ವ್ಯಕ್ತಿತ್ವವನ್ನು ಕಂಡು ಕೊಂಡಂತಾಗುತ್ತದೆ.

## ಶರೀಫರ ವ್ಯಕ್ತಿತ್ವ

ಶ್ರೀ ಶರೀಫರ ದೇಹಾಕಾರದ ಕುರಿತು ಈ ಮುದುಕೆಯು ಹಿಗೇ ಹೇಳು ತ್ತಾಳೆ– ಶರೀಫಸಾಹೇಬರನ್ನು ನೋಡಿದವರು ಇನ್ನೂ ಅನೇಕರು ಸಿಕ್ಕುವರು. ಶರೀಫರು ಒಳ್ಳೇ ಸುಂದರ ಪ್ರತಿಮೆಯಂತಹ ದೇಹಾಕಾರದವರಿದ್ದರು. ಬಣ್ಣ

ತಾಮ್ರಗೆಂಪು; ದುಂಡ ಗೋಲಾಕಾರದ ಮುಖ; ನೀಳವಾದ ತಕ್ಕ ಮೂಗು; ಅಗಲ ಕಿವಿ; ದೊಡ್ಡ ಕಣ್ಣು; ವಿಶಾಲವಾದ ಹಣೆಯಿಂದ ಕೂಡಿ ಸದ್ಭಾವನೆ ಪ್ರೇರೇಪಿಸುವ ಒಳ್ಳೇ ಆಕರ್ಷಕ ವ್ಯಕ್ತಿಗಳಾಗಿದ್ದರು. ತುದಿ ಕಾಲ್ಬೆರಳುಗಳು ಮುಚ್ಚುವಂತೆ ನಿರಿಗೆ ಹೊಯ್ದು ದಡಿ ಧೋತರವನ್ನು ಉಡುತ್ತಿದ್ದರು. ಬಿಳೀ ಬಗಲಬಂಡಿಯನ್ನು ಅಚ್ಚುಕಟ್ಟಾಗಿ ತೊಡುತ್ತಿದ್ದರು. ತಲೆಯ ಮೇಲೆ ರುಮಾಲ, ಅದನ್ನು ದುಂಡು ದುಂಡಾಕಾರವಾಗಿ ಮುಂಡಾಸದಂತೆ ಸುತ್ತು ತ್ತಿದ್ದರು. ಕೊರಳಿಗೆ ಚಕ್ರಾಕಾರವಾಗಿ ಉಪ್ಪರಣೆ ಹೊರುತ್ತಿದ್ದರು. ಅವರ ಉಡುತೊಡುಗೆಗಳು ಒಳ್ಳೇ ಅಚ್ಚುಕಟ್ಟಾಗಿಯೂ, ಓರಣವಾಗಿಯೂ ಇರು ತ್ತಿದ್ದವು. ಇಸ್ಲಾಂ ಪದ್ಧತಿಯಂತೆ ಗಡ್ಡವನ್ನು ಇಡುತ್ತಿರಲಿಲ್ಲ. ಕಾಲಲ್ಲ ಮೊಚ್ಚಿ ಜೋಡು ಧರಿಸುತ್ತಿದ್ದರು. ೧೯ ನೆಯ ಶತಮಾನದ ಶಾಲೆಯ ಅಧ್ಯಾಪಕ ರಂತೆ ಕಾಣುತ್ತಿದ್ದರು. ಊಟವು ವಿಶೇಷ ಸಾದಾ ರೀತಿಯಲ್ಲಿತ್ತು. ಮಾಂಸಾ ಹಾರವಿದ್ದಿದ್ದಿಲ್ಲ. ಮಾದಕಪೇಯ ಹಾಗೂ ಭಂಗಿ-ತಂಬಾಕುಗಳನ್ನು ಮಾತ್ರ ಸೇವಿಸುತ್ತಿದ್ದರು. ಈ ಸೇವನೆಗಾಗಿ ಸಮಾಜದಲ್ಲಿ ವಿರೋಧವುಂಟಾಗಿರುತ್ತಿ ದ್ದಿತ್ತು. ಇವರಿಗೂ ಇವರ ಗುರುಗಳಾದ ಗೋವಿಂದಭಟ್ಟರಿಗೂ ಪಂಕ್ತಿ ಗಳಲ್ಲಿ ಕರೆಯುತ್ತಿರಲಿಲ್ಲ. ಹಾಗು ಬಹಿಷ್ಕಾರಗಳು ನಡೆದಿದ್ದವೆಂದೂ ತಿಳಿ ಯುತ್ತವೆ. ಕೆಲವು ಅಪವಾದಗಳನ್ನು ಹೊರಿಸಿ ಕೊನೆಯಲ್ಲಿ ಪಶ್ಚಾತ್ತಾಪಿ ಗಳಾಗಿ ಶರಣಾಗತರಾದ ಉದಾಹರಣೆಗಳೂ ಸಿಗುತ್ತವೆ. ಸಾಮಾನ್ಯ ಜನರು ಒಳ್ಳೇ ಭಯಭಕ್ತಿಗಳಿಂದ ಕಾಣುತ್ತಿದ್ದರು. ಧ್ಯಾನನಿಷ್ಠ ಸಮಯದಲ್ಲಿ ತೂರ್ಯ ಸ್ಥಿತಿಯಲ್ಲಿ ಇವರ ಸಮೀಪಕ್ಕೆ ಯಾರು ಹೋಗುತ್ತಿರಲಿಲ್ಲ. ವಿಶೇಷ ವಾಗಿ ಯಾರ ಮನೆ-ಮಠಗಳಿಗೆ ಹೋಗಿ ಉಳಿಯುತ್ತಿರಲಿಲ್ಲ. ಬಹುತರ ಹಾಳು ದೇವಾಲಯ, ಸಾರ್ವಜನಿಕ ಗುಡಿ-ಗುಂಡಾರಗಳೇ ವಸತಿ ಸ್ಥಾನಗಳಾ ಗಿರುತ್ತಿದ್ದವು. ಕೊನೆಕೊನೆಗೆ ಶರೀಫರು ದೇವೋನ್ಮಾದದ ಪೂರ್ಣ ನಿಬ್ಬೆರಗಿ ನಲ್ಲಿರುತ್ತಿದ್ದರು. ಆಗ ಶರೀರದ ಮೇಲಿನ ಸ್ಮೃತಿ-ಪ್ರಜ್ಞೆ-ಪರಿಗಳು ಇರುತ್ತಿರ ಲಿಲ್ಲ. ಶರೀಫರು ಸ್ವಭಾವದಿಂದ ನಿಷ್ಠುರರಾಗಿದ್ದರು. ಯಾರ ದಯಾ-ದಾಕ್ಷಿಣ್ಯ ಗಳಿಗೆ ಒಳಗಾಗಿದ್ದಿಲ್ಲ. ಸತ್ಯ ಕಠೋರರಾಗಿದ್ದರು. ಆದರೆ ಮಾನವ ಕುಟುಂಬ ವನ್ನು ಒಳ್ಳೇ ವಾತ್ಸಲ್ಯದಿಂದ ಕಾಣುತ್ತಿದ್ದರು. ಸಮಾಜದ ತಪ್ಪು ನಡತೆ ಗಳನ್ನು ತೀಕ್ಷ್ಣವಾಗಿ ಖಂಡಿಸುತ್ತಿದ್ದರು. ಆದರೆ ವೈಯಕ್ತಿಕ ಯಾರ

ಮೇಲೆಯೂ ದುರುದ್ದೇಶವಿದ್ದಿಲ್ಲ. ಕತ್ತಿಯ ಅಲಗಿನಂತೆ ನುಡಿಯು ಎಷ್ಟೇ ಕಟುವಾಗಿದ್ದರೂ, ಅದರಲ್ಲಿ ನಿರ್ಲಿಪ್ತ ಭಾತನೆಯಿರುತ್ತಿತ್ತು; ಆಳವಾದ ಪ್ರೇಮವಿರುತ್ತಿತ್ತು; ಮನಸ್ಸಿನ ಮೇಲಾಗುವ ಪ್ರತಿಕ್ರಿಯೆಗಳನ್ನು ತತ್‌ಕ್ಷಣ ಹೊರಗೆ ಆಡುತ್ತಿದ್ದರು. ಶರೀಫರಲ್ಲಿ ಒಳಗೂ ಹೊರಗೂ ಎಂಬ ಭೇದವೇ ಉಳಿದಿದ್ದಿಲ್ಲ. ಯಾವ ಮಾತೂ ಮನಸ್ಸೂ "ಆತನ" ಮುಂದೆ ಆಡುವ ಸಾಕ್ಷಿಯಾಗಿತ್ತು. ಹೀಗಾಗಿ ಸ್ಫಟಿಕದಂತಹ ಸ್ವಭಾವವು ಶರೀಫರದಾಗಿತ್ತು. ಜೀವನದ ಎಲ್ಲ ರಂಗಗಳಲ್ಲಿಯೂ ಇವರ ಲೌಕಿಕ ಪರಿಜ್ಞಾನವು ಅಗಾಧವಾಗಿತ್ತು. ಹೀಗಾಗಿ ಕೇವಲ ಅರಣ್ಯ ಸೇರಿದ ಧ್ಯಾನಾಸಕ್ತ ಸನ್ಯಾಸಿಯಾಗಿದ್ದಿಲ್ಲ. ಪ್ರಪಂಚದ ಲೌಕಿಕ ವ್ಯವಹಾರಗಳ ಪಾರದರ್ಶಕರಾಗಿದ್ದರು. ಸಾಮಾನ್ಯವಾಗಿ ಇವರ ನುಡಿಗಳು ಮಾನಸಶಾಸ್ತ್ರ ಸಮಾಜ ಶಾಸ್ತ್ರಗಳ ಒರೆಗಲ್ಲಿಗೆ ಮೀರಿ ನಿಲ್ಲುತ್ತಿದ್ದವು. ಜನತೆಯ ಮಧ್ಯದಲ್ಲಿಯೇ ನಿಂತು, ಬಡತನದಲ್ಲಿ ಬೆಂದು, ಬಳಲಿ ತನ್ನ ಪಾಲಿನ ಕರ್ಮಫಲಗಳನ್ನು ಮುಚ್ಚಿಡದೆ ಮಾಜದೆ ಆಡಿ ಮಾಡಿ, ಭೋಧಿಸುತ್ತಿದ್ದ ಒಬ್ಬ ರಸ ಋಷಿಯಾಗಿದ್ದರು. ಒಮ್ಮೊಮ್ಮೆ ಊಟವಿಲ್ಲದೆ ತಿರುಗಬೇಕಾಗುತ್ತಿದ್ದಿತು. ಮುಂದಿನ ಜನ್ಮದಲ್ಲಿ ಋಣ ತೀರಿಸಬೇಕಾಗುವದೆಂಬ ಅರಿವಿನಿಂದ ಯಾರ ಮನೆಗೂ ಹೋಗಿ ಬೇಡಲಿಲ್ಲ. ಯಾರಾದರೂ ಪ್ರೇಮದಿಂದ ಒಪ್ಪಿಟ್ಟು ಕರೆದಾಗ ನೀಡಿದ್ದೇ ಪ್ರಸಾದವೆಂದು ಸ್ವೀಕರಿಸುತ್ತಿದ್ದರು. ಅತ್ತ ಮನೆಯಲ್ಲಿ ಹೆಂಡತಿ ಬಾಣಂತಿ–ಉಪವಾಸ. ಇಂತಿಂತಹ ಪರಿಸ್ಥಿಯಲ್ಲಿಯೂ ಬೇಡಲಿಲ್ಲ. ಗುಡಿಗೇರಿ ಕುಲಕರ್ಣಿಯವರು ಶರೀಫರ ಮೇಲೆ ವಿಶೇಷ ಪೂಜ್ಯ ಭಾವ; ಇವರಿಗೆ ಸಾಮಾನ್ಯವಾಗಿ ಧಾನ್ಯ ದವಸ ಕೊಟ್ಟು ಕಳಿಸುವ ಪದ್ಧತಿ–ಭಿಕ್ಷೆಯಂದಲ್ಲ- ಇದನ್ನು ಸಹ ಸ್ವೀಕರಿಸುವದಕ್ಕೆ ಹಿಂದುಮುಂದಾಗುತ್ತಿದ್ದರು.

"ಬಹುದಿನಕೆ ಬಡವ ಬಂದಾನೆಂದು ।  
ಮನ್ನಿಸಿ ಮನಕ್ಕೆ ಮೋಹವಗೊಂಡೆಯೋ ಮನಸೇ ।  
ಸತಿಸುತರ ಹಸುವಿಗೊದಗದು ಕಾಳು ।  
ಮನೆಗೊಯ್ಯೋ ಮತಿಗೇಡಿ ಎನ್ನತಿಹರೂ ।  
ಮನಸೇ ಜತಸದಲಿ ಮಹಾರಾಯನ ಸರಸ ನೋಡು ।  
ಸನುಮತದಿ ಹಿಂದಕ್ಕೆ ತಿರುಗಲೋ ಮನಸೇ ।

ಇಂದಿಗೀ ದುಷ್ಕಾಳವೆನ್ನಲಿ ಬ್ಯಾಡ।
ಮುಂದೆ ಪ್ರಳಯ ಕಾಲವೋ ಮನಸೇ।
ಬಂದಭವ ಕಳೆದು ಶಿಶುನಾಳ ಮಂದಿರದಿ ಗೋ।
ವಿಂದ ಗುರುವಿನ ಹೊಂದಿಕೋ ಮನಸೇ॥''

ಹೀಗೆಂದು ಪ್ರಾರಬ್ಧ ಕರ್ಮದ ಮೇಲೆ ವಿಶ್ವಾಸವನ್ನಿಟ್ಟು ಹಂಗಿನ ಬಾಧೆಗೆ ಅಂಜಿ ಲಂಘನ ಕೈಕೊಳ್ಳುತ್ತಿದ್ದರು. ಗುಡಗೇರಿ ಕುಲಕರ್ಣಿ ಭೀಮರಾಯರ ಮನೆಯಲ್ಲಿಯೂ, ಕುಂದಗೋಳ ನಾಡಗೇರ ಗೌಡಸಾನಿಯಲ್ಲಿಯೂ ಮನಸ್ಸು ಬಿಚ್ಚಿ ಒಳ್ಳೇ ಸಲುಗೆಯಿಂದ ಊಟ-ವಸತಿ ಮಾಡುತ್ತಿದ್ದರೆಂದು ತಿಳಿಯುತ್ತದೆ. ಕೊನೆಗೆ ಸಾಲದ ಭಾರ ಹೆಚ್ಚಾಗಲು ಇದಕ್ಕಾಗಿ ಶರೀಫರು ತಮ್ಮ ಹೊಲ-ಮನೆ ಶಿಶುನಾಳ ಗ್ರಾಮದ ರೆವಿನ್ಯೂ ಸರ್ವೇ ನಂಬರ ೨೪೩, ೨೪೪/೨-೨೦ ಯಕರೆ ೨೪ ಗುಂಠೆ ಕ್ಷೇತ್ರದ ೧೩ ರೂ. ಆಕಾರದ ಆಸ್ತಿಯನ್ನು ೨೦೦ ರೂ. ಗಳಿಗೆ ಕ್ರಿ. ಶ. ೧೮೮೮ ಅಗಸ್ಟ ತಿಂಗಳಲ್ಲಿ ಮಾರಾಟ ಮಾಡಿದ್ದಾರೆ. ತಿರದುಂಬುವ ಕಾಯಕಕ್ಕೂ, ವೇದಾಂತ ಮಾರ್ಗದ ಹೆಸರಿನಲ್ಲಿ ಗುಂಪು ಕಟ್ಟಿಕೊಂಡು ತಿರುಗುವ ಭಗವಾ ವೇಷ ಭೂಷಣದಲ್ಲಿರುವ ಗಾಂಜಾ ಮೇಳದವರಿಗೂ ಸೇರುತ್ತಿರಲಿಲ್ಲ. ಸಾಮಾನ್ಯ ಜನರ ಸ್ವಭಾವ ಮತ್ತು ರೀತಿ ನೀತಿ ನಡಾವಳಿಗಳನ್ನು ಪೂರ್ಣ ತಿಳಿದವರಾಗಿದ್ದು ಸಮಾಜದಲ್ಲಿ ಸ್ವಾಸ್ಥ್ಯ-ಶಾಂತಿ-ನೈತಿಕ ಜೀವನ ಕ್ರಮ ಗಳನ್ನು ಭೋಧಿಸುತ್ತಿದ್ದರು. ಇದಕ್ಕಾಗಿ ಸುತ್ತಲಿನ ಗ್ರಾಮುಗಳಿಗೆ ಹೋಗಿ ಅವರ ತಿಳುವಳಿಕೆಯ ಮಟ್ಟದಲ್ಲಿ ಅವರೊಡನೆ ಬೆರೆತು, ಉಪದೇಶ ಮಾಡುತ್ತಿದ್ದರು. ಧಾರ್ಮಿಕ ಮತ್ತು ಸಾಮಾಜಿಕ ಗುಂಪು ಭೇದ ವೈಷಮ್ಯಗಳಿಗೆ ಪ್ರೋತ್ಸಾಹಿಸುತ್ತಿದ್ದಿಲ್ಲ. ಪಕ್ಷ ನಂಬುಗೆಗಳನ್ನು ಹುಟ್ಟಿಸುತ್ತಿದ್ದಿಲ್ಲ. ಸುತ್ತಲಿನ ಕ್ಷೇತ್ರ ಜಾತ್ರೆ ಸಾಮೂಹಿಕ ಸಾಂಸ್ಕೃತಿಕ ಧಾರ್ಮಿಕ ಸಮಾರಂಭಗಳಿಗೆ ಜಾತಿ ಪಂಥ ಭೇದಗಳಿಲ್ಲದೆ ಹೋಗುತ್ತಿದ್ದರು. ಭಾಗವಹಿಸುತ್ತಿದ್ದರು. ಇವು ಶರೀಫರ ಜೀವನ ಕ್ರಮವಾಗಿದ್ದವು.

### ಶ್ರೀ ಶರೀಫರ ಸಮಕಾಲೀನರು

ಶ್ರೀ ಶರೀಫರು ಬಾಳಿ ಬದುಕಿ ಬೆಳಗಿದ ಕಾಲವು ೧೯ನೆಯ ಶತಮಾನದ ಉತ್ತರಾರ್ಧವು; ಆಧ್ಯಾತ್ಮಿಕ ಕ್ಷೇತ್ರದಲ್ಲಿ ಉಜ್ವಲ ಪರಂಪರೆಗಳನ್ನು ಸೃಷ್ಟಿ-

ಸಿತು. ಅನೇಕ ಸತ್ಯಶರಣರಿಗೂ ಮಹಿಮಾ ಪುರುಷರಿಗೂ ಜನ್ಮ ಕೊಟ್ಟಿತು. ಈ ಸಿದ್ಧ ಸತ್ಪುರುಷರಿಂದ ನಾಡಿಗೆ ಅಪಾರವಾದ ದೈವೀ ಪ್ರಜ್ಞೆಯನ್ನು ಪ್ರೇರೇಪಿಸಿತು. ಈ ದಿವ್ಯ ಸಂದೇಶಗಳನ್ನು ಬೀರಿದವರ ಮಾಲಿಕೆಯಲ್ಲಿ ಶ್ರೀ ಚಿದಂಬರ ದೀಕ್ಷಿತರು. ಶ್ರೀ ಬಾಲ ಲೀಲಾಮಹಾಂತ ಶಿವಯೋಗಿಗಳೂ, ಶ್ರೀ ಗುರುಗೋವಿಂದ ಭಟ್ಟರು ಗುಡಗೇರಿ ಕಲ್ಮಠದ ಸಂಗಮೇಶ್ವರರು, ಅಂಕಲಗಿ ಶ್ರೀ ಅಡವಿ ಸ್ವಾಮಿಗಳು, ಅಗಡಿ ಶೇಷಾಚಲದ ಸ್ವಾಮಿಗಳು, ಗದುಗಿನ ಶ್ರೀ ಶಿವಾನಂದರು, ಶ್ರೀ ಗರಗದ ಮಡಿವಾಳಪ್ಪನವರು, ಶ್ರೀ ನವಲಗುಂದದ ನಾಗಲಿಂಗಪ್ಪನವರು, ಅವರಾದಿ ಫಲಹಾರ ಸ್ವಾಮಿಗಳು. ವಿಶ್ವಕರ್ಮದ ಪ್ರಭು ಸ್ವಾಮಿಗಳು ಮತ್ತು ಕೊನೆಯದಾಗಿ ಹುಬ್ಬಳ್ಳಿಯ ಶ್ರೀ ಸಿದ್ಧಾರೂಢರು. ಇವರೆಲ್ಲರೂ ಶರೀಫರ ಮೇಲೆ ಪ್ರಭಾವ ಬೀರಿದ್ದಾರೆ. ಶ್ರೀ ಚಿದಂಬರ ಸ್ವಾಮಿಗಳು ಬಾಲಲೀಲಾ ಮಹಾಂತ ಶಿವಯೋಗಿಗಳು ಶರೀಫರಿಗೆ ಒಡನಾಟದ ಸಮಕಾಲೀನರಾಗದೆ ಅತಿ ಹಿರಿಯ ಸ್ಥಾನದಲ್ಲಿದ್ದರು. ಇತ್ತ ಹುಬ್ಬಳ್ಳಿಯ ಶ್ರೀ ಸಿದ್ಧಾರೂಢರು ಇವರೊಳಗೆ ಅತಿ ಚಿಕ್ಕವರಾಗಿದ್ದರು, ಶ್ರೀ ಬಾಲಲೀಲಾ ಮಹಂತ ಶಿವಯೋಗಿಗಳ ಕುರಿತು ಶರೀಫರು ಕಾವ್ಯಕಾಣಿಕೆ ಸಲ್ಲಿಸಿದ್ದುಂಟು "ಅಪ್ಪಯ್ಯನವರ ಪಾದಾ ಕಂಡೆ" ಮತ್ತು "ಯೋಗಿಯ ಕಂಡೆನು | ಹುಚ್ಚೇಂದ್ರಯೋಗಿಯ ಕಂಡೆನಾನು" ಹೀಗೆಲ್ಲಾ ಅವನನ್ನು ಹೊಗಳಿದ್ದಾರೆ. ಶರೀಫ, ನಾಗಲಿಂಗ, ಗರಗದ ಮಡಿವಾಳಪ್ಪ ಈ ತ್ರಿಮೂರ್ತಿಗಳು ಒಂದು ಆತ್ಮ ಮೂರು ದೇಹಿಗಳಾಗಿದ್ದರು. ವಿಶೇಷವಾಗಿ ಮುರಗೋಡದ ಬಳಿಯ ಸಿದ್ಧನ ಗವಿಯಲ್ಲಿ ಕೂಡುತ್ತಿದ್ದರು; ಕಲೆಯುತ್ತಿದ್ದರು. ಸಾದನ ಕ್ರಮಗಳ ಕುರಿತು ವಿನಿಮಯಿಸುತ್ತಿದ್ದರು. ಆಧ್ಯಾತ್ಮ ಮಾರ್ಗದಲ್ಲಿ ಮೂವರ ಕ್ರಮಗಳೂ ಬೇರೆ ಬೇರೆ ಯಾಗಿದ್ದವೆಂದೂ ತಿಳಿಯುತ್ತದೆ. ನವಿಲುಗುಂದದ ನಾಗಲಿಂಗಪ್ಪ ಹಠಯೋಗಿ, ಸಿದ್ಧಪುರುಷ, ಲೀಲಾ ಮೂರ್ತಿ. ಶರೀಫರನ್ನು ಕೂಡಿಕೊಂಡು ಅತ್ತಿತ್ತ ಚರಿಸುತ್ತಿದ್ದರು. ಆಗ ನಾಗಲಿಂಪ್ಪನವರು ಮಾಡುವ ಸಿದ್ಧಲೀಲೆ-ಪವಾಡ-ಹಾಗೂ ಕೌತುಕಗಳನ್ನು ಕಂಡು ಶರೀಫರು ಹೀಗೆ ಅಂದಿದ್ದಾರೆ.

"ಒಂದು ಹೆಣಕೆ ಎರಡು ಹೆಣವು ದಣಿವು ದೇತಕೆ |
ನಾಗಲಿಂಗಯೋಗಿ ತಾನ ತಿರುಗುವ ದೇವತೆ ||
ವಾದದಿಂದ ಸಿದ್ಧಯೋಗ ಮಾಡುವದೇತಕೆ |

ಅಘಟಿತ ಘಟನೆಗಳನ್ನು ತೋರಿಸುವಂತಹ ಹಠಯೋಗಿ ಸಿದ್ಧ ಕಲೆಗಳನ್ನು ಶರೀಫರು ಪ್ರೋತ್ಸಾಹಿಸಿದಂತಿಲ್ಲ. ಒಡನಾಟವಾಡಿದ ಆ ಯೋಗಿ. ಸತ್ಪುರುಷರ ಸತ್ಕೀರ್ತಿ-ಸತ್ಕಾರ್ಯಗಳನ್ನು ಹೊಗಳಿದ್ದಾರೆ. ಒಬ್ಬೊಬ್ಬರಾಗಿ ಒಂದೊಂದು ಕವನವನ್ನು ಮೀಸಲಿಟ್ಟಿದ್ದಾರೆ.

"ಸಾಧು ನೋಡಪ್ಪೋ ಇವನು ಸಾಧು ನೋಡವೆ ॥ ಪ ॥
ವೇದಾತೀತು ನಾದತೀತ । ವಾದತೀತ ಬ್ರಹ್ಮತೀತ । "

ಹೀಗೆಂದು ಅಗಡಿ ಶ್ರೀ ಶೇಷಾಚಲದ ಸ್ವಾಮಿಗಳನ್ನು ಹುಬ್ಬಳ್ಳಿಯಲ್ಲಿ ಕಂಡಾಗ ಹಾಡಿದ್ದಾರೆ. ಶ್ರೀ ಶರೀಫರು ಶ್ರೀ ಸಿದ್ಧಾರೂಢರನ್ನು ಕೊನೆಯ ದಿನಗಳಲ್ಲಿಯೇ ಕಂಡಂತಿದೆ. ಆಗ ಶ್ರೀ ಸಿದ್ಧಾರೂಢರು ಬಾಲ ಪಂಡಿತರು. ನವಿಲಗುಂದದ ನಾಗಲಿಂಗಪ್ಪ—ಶರೀಫರು ಕೂಡಿಕೊಂಡೇ ದರ್ಶನ ತಕ್ಕೊಂಡಿದ್ದಾರೆ.

"ಆ-ರೂಢಾ ಈ-ರೂಢಾ ಪ್ರಭು ಆಡೋ ನಿರಂಜನ ।
.. .. .. .. .. .. .. .. .. .. .. ..
ಬಹಳ ವಿಚಾರದಿ ದಣಿದು ದಣಿದು ನಾನೋಡಬಂದೆ ॥
ಲಂಗೋಟ ಹಾಕಿದಿ ಕಂಗ್ಗೆಟ್ಟು ಶೋಕದಿ ।
ತುಂಗ ಶಿಶುನಾಳದೀಶನ ಸೇವಕಾ ಇಂತತಾತ್ಮ ಆದರ ಇಂಗಿತ
ತಿಳಿದವನೇ ಆರೂಢಾ''

ಕುರಿತಾಗಿ ಹೀಗೆ ಹಾಡಿದ್ದಾರೆ. ಆರೂಢ ಪದವಿಗೇರುವ ದಾರಿಯು ಕಠಿಣ-ಸಾಧ್ಯವೆಂಬುದು ಸೂಚಿಸಿದ್ದಾರೆ. ಹೀಗೆ ಸತ್ಪುರುಷರ ದಿವ್ಯ ಚರಿತ್ರ ಮತ್ತು ಅವರು ತೋರಿದ ದಿವ್ಯ ಮಾರ್ಗ ಗಮನವನ್ನು ಹಾಡಿದ್ದಾರೆ; ಅವರು ತುಳಿದ ನೆಲ, ಮಿಂದ ಜಲ, ಗಾವನಕ್ಷೇತ್ರವೆಂದು ಬಣ್ಣಿಸಿದ್ದಾರೆ.

## ಶಿಶುನಾಳಧೀಶನ ಮುದ್ರಿಕೆ ರಹಸ್ಯ

ಶ್ರೀ ಶರೀಫರು ತಮ್ಮ ಕಾವ್ಯಗಂಗೆಗೆ ಶಿಶುನಾಳಧೀಶನ ಮುದ್ರಿಕೆಯನ್ನು ಕೊಟ್ಟಿದ್ದಾರೆ. ಇಂತಹ ಮುದ್ರಿಕೆಗಳನ್ನು ವಚನ-ಕಾವ್ಯ ಸಾಹಿತ್ಯಗಳಲ್ಲಿ ಕಾಣುತ್ತೇವೆ. ಈ ಮುದ್ರಿಕೆಗಳು ಇಷ್ಟ ದೇವತೆಯ ಸೂಚಿಕೆಯಾಗಿವೆ.

ಭಕ್ತಿಭಾಂಡಾರಿ ಬಸವಣ್ಣವವರು 'ಕೂಡಲ ಸಂಗಮ' ಅಲ್ಲಮಪ್ರಭುಗಳು "ಗುಹೇಶ್ವರ", ಅಕ್ಕಮಹಾದೇವಿಗಳು "ಚೆನ್ನಮಲ್ಲಿಕಾರ್ಜುನ", ಪುರಂದರ ದಾಸ-ಕನಕದಾಸರು "ಪುರಂದರ ವಿಠ್ಠಲ" "ಕಾಗಿನೆಲ ಕೇಶವ" ನೆಂದು ಅಂಕಿತವಿಟ್ಟುಕೊಂಡಿದ್ದಾರೆ. ಹೀಗೆಯೇ ಶರೀಫ ಸಾಹೇಬರು ತಮ್ಮ ಅನುಭವಸಾರದ ಕಾವ್ಯಗಂಗೆಗೆ ಶಿಶುನಾಳಧೀಶನೆಂಬ ಪದ ಪ್ರಯೋಗ ಮಾಡಿದ್ದಾರೆ. ಈ ಮುದ್ರಿಕೆಗಳು ಸಾಮಾನ್ಯವಾಗಿ ಇಷ್ಟ ದೇವತೆಯಲ್ಲಿ ಸಮರಸವಾಗಿದ್ದ ಅನುಭಾವದ-ಐಕ್ಯದ ಇಂಗಿತವನ್ನು ಸೂಚಿಸುತ್ತವೆ. ಈ ಮುದ್ರಿಕೆಗಳ ಶಬ್ದ ಸಂಪತ್ತನ್ನು ಜಡಭೌತಿಕವಾಗಿ, ವ್ಯಾಕರಣ ಶಾಸ್ತ್ರ, ಭೌಗೋಲಿಕ ಶಾಸ್ತ್ರ, ಭಾಷಾಶಾಸ್ತ್ರಗಳ ಒರೆಗಲ್ಲಿಗೆ ಹಚ್ಚಿ ನೋಡದೆ, ನಮ್ಮ ಪರಂಪರೆ-ಅನುಭಾವ ಶಾಸ್ತ್ರಗಳ ದಿವ್ಯಜ್ಞಾನ-ಸಾಂಪ್ರದಾಯಗಳ ಹಿನ್ನೆಲೆಯಲ್ಲಿ ಹುದುಗಿದ, ಭಾವದ ಅರುಹಿನ-ವಿಕಾಸದ ರಹಸ್ಯದ, ವೈರಾಗ್ಯ ಸಂಪತ್ತಿನ ದೃಷ್ಟಿಯಲ್ಲಿ ಕಾಣಬೇಕು. ಅಂದರೆ ಈ ಜೋಡು ನುಡಿಗಳನ್ನು ಸ್ಥೂಲವಾಗಿಯೂ, ಸ್ಥಾವರವಾಗಿಯೂ ಸ್ಮರಿಸಿಕೊಳ್ಳದೆ, ಸೂಕ್ಷ್ಮವಾಗಿಯೂ, ಭಾವಭರಿತವಾಗಿಯೂ ಗ್ರಹಿಸಿಕೊಳ್ಳಬೇಕು. ಈ ಮುದ್ರಿಕೆಗಳಲ್ಲಿ ಸೂಚಿಸಲ್ಪಟ್ಟ ಸ್ಥಳಗಳು ಕನ್ನಡ ವಾಙಯದಲ್ಲಿ ಕುರುಹುಗಳಾಗಿ ಮೆರೆಯಲ್ಪಟ್ಟಿರುವದರಿಂದ ಇವುಗಳಲ್ಲಿ ಗರ್ಭೀಕರಿಸಿಕೊಂಡಿರುವ ಭಾವಗಳು ಪ್ರಸನ್ನವಾಗುವವು. ಪ್ರಸ್ತುತ ಶಿಸುನಾಳಧೀಶನೆಂಬುದು ಶ್ರೀ ಶರೀಫರ ಹುಟ್ಟೂರಾದ ಶಿಶುನಾಳ ಗ್ರಾಮದ ಗ್ರಾಮದೇವತೆಯಾಗಿದೆ. ಇದು ಗ್ರಾಮದ ಮಧ್ಯದಲ್ಲಿ ಕಳಸ; ಮೇಲ್ಮಾಳಿಗೆಯಿಲ್ಲದ ಒಂದು ಬಸವ ಮಂದಿರ; ಇದು ಸ್ತಂಬಮೂರ್ತಿ, ಅಂದರೆ ಕಂಬವನ್ನೇರಿ ಕುಳಿತ ಬಸವ ವಿಗ್ರಹವು. ಗಿಡ-ಮರಗಳ ನೆಳಲಿನಿಂದ ಆಚ್ಛಾದಿಸಲ್ಪಟ್ಟಿದ್ದಾನೆ. ಗ್ರಾಮದ ಜಾಗ್ರತ ಸ್ಥಾನಾಧಿಪತಿಯೊಂದೂ ಸತ್ಯ-ಪ್ರಭಾವಿತನೆಂದೂ ಅನನ್ಯ ಭಾವದಿಂದ ಪೂಜೆಗೊಳ್ಳುತ್ತಾನೆ. ಈ ಸ್ಥಾವರ ವಿಗ್ರಹವೇ ಶಿಶುನಾಳಧೀಶನೆಂಬ ಮುದ್ರಿಕೆಯಾಗಿದೆ. ಇದು ಶ್ರೀ ಶರೀಫರ ಅನುಭಾವದ ಅಂತರಂಗದ ಪ್ರತಿಭೆಯಾಗಿ ಕಾವ್ಯಗಂಗೆಯಾಗಿ ಹೊರಹೊಮ್ಮಿದೆ. ಶ್ರೀ ಶರೀಫರು ಅಂತರಂಗದಲ್ಲಿನ ಆಳವಾದ ಆಧ್ಯಾತ್ಮಿಕ ಅನುಭವ ಜೀವನಕ್ಕೆ ಒಳಗಂಣಿನ ಒಳಬಳಿಕೆಗಾಗಿ-ಹೊರಬಳಿಕೆಯಲ್ಲಿರುವ ಸಾಕಾರವಾಗಿರುವ ಈ ಶಿಶುನಾಳನನ್ನು ತನ್ನ ಕಾವ್ಯಗಂಗೆಗೆ ಹೆಸರನ್ನಿಟ್ಟಿ

ತ್ತಿದ್ದಿಲ್ಲ. ಶ್ರೀ ಶರೀಫರು ಹೆಚ್ಚು ಕಡಿಮೆ ಚರಮೂರ್ತಿಗಳಾಗಿದ್ದರು. ವಿಶೇಷ ವಾಗಿ ಹುಟ್ಟೂರಾದ ಶಿಶುನಾಳದ ಸೂತ್ತಲೂ ಮತ್ತು ಧಾರವಾಡ ಜಿಲ್ಹೆ ಯಲ್ಲಿಯೂ, ವಿಶೇಷ ಕರೆ ಬಂದಾಗ ಬೆಳಗಾಂವಿ ಜಿಲ್ಹೆಯ ಮುರಗೋಡ, ಗುರ್ಲಹೊಸೂರ,ಎಲ್ಲಮ್ಮನಗುಡ್ಡ,ಅಂಕಲಗಿ, ಕಾರವಾರ ಜಿಲ್ಲೆಯ ಉಳವಿ ಹೀಗೆ ಅಲೆದಾಡುತ್ತಿದ್ದರು. ಹುಲಗೂರು, ಗುಡಿಪುರ, ಲಕ್ಷ್ಮೇಶ್ವರ, ಸಾಂಸಿ, ಮುಳಗುಂದ, ಸಿಗ್ಗಲಿ, ಕುಂದಗೋಳ ಕಾರಡಗಿ, ಬೂದೀಹಾಳ ಅತ್ತಿಗೇರಿ, ಚಾಕಲಬ್ಬಿ, ಪಶುಪತಿಹಾಳ, ಮುಕ್ತಿಮಂಧಿರ, ಸೂಲ್ಪಿ ಈ ಗ್ರಾಮುಗಳಲ್ಲಿ ನಡೆಯುವ ಜಾತ್ರೆ, ತೇರು, ಪೂಜೆಗಳಿಗೆ ಹೋಗುತ್ತಿದ್ದರು. ಈ ಗ್ರಾಮಗಳ ಲ್ಲಿರುವ ಗದ್ದುಗೆ–ಮಠ–ಪೂಜಾಸ್ಥಾನಗಳ ಕುರಿತು ಬಣ್ಣಿಸಿದ್ದಾರೆ. ಇವು ಗಳಲ್ಲಿ ಕೆಲವೆಡೆ ಹುಲಗೂರ, ಖಾದರಶಾ ಅಥವಾ ಖಾದರಲಿಂಗನ ಸಮಾಧಿ ಮುಳಗುಂದದ ಬಾಲಲೀಲಾ ಮಹಾಂತ ಶೀವಯೋಗಿಗಳ ಕರ್ತೃಗದ್ದುಗೆ, ಹುಬ್ಬಳ್ಳಿಯ ಮಠಗಳೂ, ಸೂಲ್ಪಿಯ ಗುರು ಗೋವಿಂದರ ಗುರಗಳ ಸಮಾ ಧಿಯೂ, ಸಾಂಸಿ, ಶಿಗ್ಗಲಿ ಮುಂತಾದವು ಈಗಲೂ ಪ್ರೇಕ್ಷಣೀಯವೂ ಭಕ್ತಿ ಪ್ರಸನ್ನವೂ ಆದ ಕುರುಹುಗಳುಳ್ಳ ಸ್ಥಳಗಳಾಗಿರುವವು. ಇನ್ನು ಶರೀಫರು ಮುರಗೋಡ, ಗುರ್ಲ ಹೊಸೂರುಗಳಲ್ಲಿರುವ ಚಿದಂಬರ ದಿಕ್ಷೀತರ ಯಜ್ಞ ಯಾಗಾದಿಗಳ ಸಮಾರಂಭಕ್ಕೆ ಹೋಗುತ್ತಿದ್ದಂತೆ ತೋರುತ್ತದೆ. ಇದರಂತೆ ಒಕ್ಕುಂದಕ್ಕೆ ಗರಗದ ಮಡಿವಾಳಪ್ಪನವರಲ್ಲಿಗೂ, ನವಿಲುಗುಂದದ ನಾಗ ಲಿಂಗಪ್ಪನವರಲ್ಲಿಗೂ ಎಡತಾಕುತ್ತಿದ್ದರು. ಶ್ರೀ ಶರೀಫರು, ಶಿವಶರಣರು ಹಾಯ್ದುಹೋದ ದಾರಿಗುಂಟ, ಉಳವಿಗೆ ಅನೇಕಸಲ ಹೋದಂತೆ ತಿಳಿಯು ತ್ತದೆ. ಈ ದಾರಿಗುಂಟ ಕಂಡ ಕ್ಷೇತ್ರಗಳನ್ನು ವರ್ಣಿಸಿರುವರು.

> "ಉಳವಿಯು ಜಾತರಿಗೆ ಹೋಗುವ ಬನ್ನಿರಮ್ಮ ॥
> ತಿಳಿದು ಬ್ರಹ್ಮನ ಬಮುಲೊಳಗಾಡೋಣಮ್ಮ ॥ ಪಲ್ಲ ॥
> ಬಲುಸಂಸಾರ ವೆಂಬುವ ॥ ಹಳುವನೆಲ್ಲವ ದಾಟಿ॥
> ಸುಳಿದಾಡಿ ಶರಣರ ॥ ಬಳಿವಿಳಿದಾಡುತ" ॥ ೧ ॥

ಹೀಗೆ ಹಾಡುತ್ತ ಚೆನ್ನಬಸವಣ್ಣನವರು ಕೈಕೊಂಡ ಯೋಗಸಾನ್ನಿಧ್ಯ ಮತ್ತು ಐಕ್ಯ ಸ್ಥಳಗಳನ್ನು ಬಣ್ಣಿಸಿದ್ದಾರೆ "ಎಲ್ಲ ಜಂಜಡ ಬಿಟ್ಟು ಯಾರಿಗಂಜವಲೇ"

ಎಂದು ಅನುಷ್ಠಾನ ಮಾಡಿದ ತಪಸಿದ್ಧಾಶ್ರಮದಲ್ಲಿ ಅಲ್ಲಿ ಕೆಲಕಾಲ ನಿಂತಿದ್ದಂತೆಯೂ ತೋರುತ್ತಿದೆ. ಷಟ್‌ಸ್ಥಳ ಚಕ್ರವರ್ತಿಯೆನಿಸಿದ ಚೆನ್ನಬಸವಣ್ಣನವರ ಮಹಿಮೆಯ ಕುರಿತು ಅನೇಕ ಪದ್ಯಗಳನ್ನೂ ಅಲ್ಲಿಯೇ ರಚಿಸಿದ್ದಾರೆ. ಷಟ್‌ಸ್ಥಳ ಸಿದ್ಧಾಂತದ ಬಗೆಗೆ ತನ್ನ ಅನುಭವಗಳನ್ನು ಹೇಳುವಾಗೆಲ್ಲ ಚೆನ್ನಬಸವ ಬಸವ ಅಲ್ಲಮ ಮತ್ತು ಶಿವಶರಣರನ್ನು ಮನವಾರೆ ಹೊಗಳಿದ್ದಾರೆ.

"ಅಲ್ಲಮ ಮಹಾಪ್ರಭುವಿ ಸಿರಿಯುಮನ ತುಂಬಿ
ಯೋಗಮಂದಿರದೊಳು ಬೆಳಗುವ ॥
ಕಳೆಯುಳ್ಳ ಬಸವಾದಿ ಪ್ರಮಥರು ||"

ಇಷ್ಟ-ಪ್ರಾಣ-ಭಾವಲಿಂಗಗಳ ಬೆಸುಗೆಯಿಂದ ಅರಿವಿನ ಪೂರ್ಣ ವಿಕಾಸವನ್ನು ಹೊಂದುವ ತತ್ವಪ್ರಕಾಶಿಕನಾದ ಚೆನ್ನಬಸವನನ್ನು ಶ್ರೀ ಶರೀಫರು ಒಳ್ಳೇ ಗೌರವಸ್ಥಾನದಲ್ಲಿಟ್ಟುಕೊಂಡಿದ್ದರು. ಶಿವಶರಣರ ಕಟ್ಟಾಚಾರದ ಅನುಭವೋಕ್ತಿಗಳನ್ನು ತನ್ನ ಪದ್ಯದಲ್ಲಿ ಹೇಳಿದ್ದಾರೆ. ಡಂಭಾಚಾರದ ಗುರುಲಿಂಗ ಜಂಗಮ ವರ್ಗವನ್ನು ಕಡೆಗಣಿಸಿ ನೋಡಿದ್ದಾರೆ.

"ಲಿಂಗದೊಳಗೆ ಮನವಿಡದೆ ಅಷ್ಟಾವರಣದ ॥
ಇಂಗಿತ ತಿಳಿಯದಗೇನು ಫಲ ।
ಜಂಗಮ ಜಂಗು ಕಟ್ಟಿ । ಹಿಂಗದೆ ತಿರುಗಲು ॥
ಸಂಗನ ಶರಣರಿಗೇನು ಫಲ।"

ಶರಣಮಾರ್ಗವಿಡಿದ ತಪೋಸಿದ್ಧರನ್ನು ಅರಸುತ್ತ ಅಲೆಯುತ್ತ ಶ್ರೀ ಶರೀಫರು ತಿರುಗುತ್ತಿದ್ದರು. ಇಂತಹ ಸರ್ವಶ್ರೇಷ್ಠ ಜಂಗಮ ಯೋಗಿಯಾದ ಅಂಕಲಗಿ ಕ್ಷೇತ್ರದ ಅಡವಿ ಸ್ವಾಮಿಗಳಲ್ಲಿಗೆ ಹೋಗಿ ನೆಲೆಸಿದ್ದಂತೆಯೂ ಅವರ ಕವನದಿಂದ ತಿಳಿಯುತ್ತದೆ. ಈ ಅಂಕಲಗಿಯು ಬೆಳಗಾಂವ ಜಿಲ್ಹೆಯ ಗೋಕಾಕ ತಾಲೂಕಿನಲ್ಲಿದೆ. ಪುರಾತನ ಭವ್ಯ ಮಠವಿದೆ. ಅಲ್ಲಿ ಗದ್ದುಗೆಯಿದೆ. ಈ ಅಡವೀ ಸ್ವಾಮಿಗಳಿಗೆ ಅಡವೀ ಪಾಚ್ಛಾನೆಂದು ಸಂಭೋಧಿಸುತ್ತಿದ್ದರು. ಒಳ್ಳೇ ಹಟಯೋಗಿಗಳಾಗಿದ್ದರು.

"ಹೋಗೋಣ ನಡಿಯೇ ಬೇಗನೆ ಎದ್ದು ।
ಸಾಗಿ ಸದ್ಗುರುವಿನ ಮಂದಿರಕೆದ್ದು ॥ ಪ ॥

ಮೃಡನ ಅಕಾರಾಪೊಡವಿಯೊಳು ಬಡವರಾಧಾರ ।
ಬಿಡದೆ ಭಕ್ತಜನರ ಉದ್ಧಾರಾ ॥
ಮಾಡುತಲಿಹ ಅಡವಿಪಾಚ್ಛಾ॥ ನೆಂಬೋ ಒಡಿಯಾನ ಮಠಕೆದ್ದು ॥೧॥

.. .. .. .. .. .. .. .. ..
ಪಂಕಜ ಮುಖಿ ಶಂಕರರೆನಿಸಿದ ಅಂಕಲಗಿ ಸ್ಥಳಕೆನ್ನು
ಹರಲೀಲ ಧರಿಸಿದ ಮಹಿಮನ ಪಾದಕೆ ॥''

ಹೀಗೆ ಕಿಂಕರನಾಗಿ ಈ ಯೋಗಿವರ್ಯರ ಕೃಪಾಶೀರ್ವಾದಗಳಿಗೆ ಪಾತ್ರನಾಗಿದ್ದಂತೆ ಈ ಪದ್ಯಗಳಿಂದ ತಿಳಿಯುತ್ತದೆ. ಬುನಾದಿಯಿಂದ ಪ್ರಸಿದ್ಧಿಗೊಂಡಿರುವ ಸವದತ್ತಿ ಬಳಿಯಿರುವ ಏಳುಕೊಳ್ಳದ ಎಲ್ಲಮ್ಮನ ಸುಕ್ಷೇತ್ರ ಸಂದರ್ಶಿಸಿದ್ದಾರೆ. ಅಲ್ಲದೆ ದೇವಿಯಿಂದ ಇಕ್ಕೇರಿ ವರಗಳನ್ನು ಪಡೆದರೆಂದೂ ಹೇಳಲಾಗುತ್ತಿದೆ.

ಜಯ ಜಯತು ಜಗದಂಬೆ ಭಕ್ತರ ಕುಟುಂಬೆ॥''

ಎಂದೂ- "ಜಗನ್ಮಾತೆ ಜಯತು ಜಗದಾಂಬಾ ಪಾಹಿಮಾಂ" ಎಂದೂ

ಎಲ್ಲಮ್ಮನಂಥಾಕೆಲ್ಲಿಕಾಣೆ ॥ ಎಲ್ಲಿ ಕಾಣೆ ॥ ಪ ॥
ಎಲ್ಲಿಕಾಣೆನು ಶಿವನೊಲ್ಲಭೆಯೆನಿಸಿದ ।
ಕಲ್ಲಿನೊಳು ಪುಟ್ಟ ಉಗರಕೊಳ್ಳ ಇಳಿದಿ ॥ ಅ. ಪ. ॥"

ಹೀಗೆ ಆಕೆಯ ಮಹಿಮೆಯನ್ನು ಕುಣಿಕುಣಿದು ಹಾಡಿ ಹರಿಸಿದ್ದಾರೆ.

ಒಟ್ಟಿಗೆ ಶ್ರೀಶರೀಫರು ಉತ್ತರ ಕರ್ನಾಟಕದ ಅವರ ಕಾಲದಲ್ಲಿ ಪ್ರಚಲಿತವಾದ ಕ್ಷೇತ್ರಗಳನ್ನೂ ಸಾಧು-ಸಂತರು ಮಹಿಮರನ್ನೂ ಸಂದರ್ಶಿಸಿದ್ದಾರೆ. ಆಶೀರ್ವಾದ ಮೆಚ್ಚಿಗೆ ಪಡೆದಿದ್ದಾರೆ. ಸಾಧು-ಸತ್ಪುರುಷರು ಅವರು ಮಾಡಿದ ಸೇವೆ, ಹಾಡಿದ ಹಾಡುಗಳನ್ನು ಒಂದು ಮಾಲಿಕೆಯಲ್ಲಿ ಹೆಣೆದರೆ ೧೯ನೆಯ ಶತಮಾನದ ಆಧ್ಯಾತ್ಮಿಕ ಪುರುಷರ ಒಂದು ಚಿಕ್ಕ ಚರಿತ್ರ ಗ್ರಂಥವಾಗುತ್ತದೆ.

## ಶ್ರೀ ಶರೀಫರ ಪಶು-ಪಕ್ಷಿಗಳ ಸೃಷ್ಟಿಕ್ರಮ:

ಶ್ರೀ ಶರೀಫರು ಸೃಷ್ಟಿ ಮತ್ತು ಸೃಷ್ಟಿಕ್ರಮಗಳ ಕುರಿತು ಸೃಷ್ಟಿಕರ್ತನಲ್ಲಿ ನಂಬುಗೆಯಿಟ್ಟ ಅನುಯಾಯಿಗಳಾಗಿದ್ದಾರೆ. ಶ್ರೀ ಶರೀಫರು ತಮ್ಮ ಕಾವ್ಯಗಂಗೆಯಲ್ಲಿ ಮನುಷ್ಯ ಮೊದಲ್ಗೊಂಡು ಸಕಲ ಪ್ರಾಣಿಗಳಿಗೆ ಸಮಭಾವದ ಗೌರವ ಸಲ್ಲಿಸಿದ್ದಾರೆ. ಸೃಷ್ಟಿಕರ್ತನು ಹುಟ್ಟಿಸಿದ ಇರುವೆ ಮೊದಲುಗೊಂಡು ೮೦ಕೋಟಿ ಜೀವರಾಶಿಗಳಲ್ಲಿ ತಾರತಮ್ಯ ಮಾಡಿರುವದಿಲ್ಲ. ಇದುವೆ ಮಾನವನ ಸತ್ವ ಗುಣಪ್ರಧಾನವಾಗಿದೆ. ಮಾನವೀಯತೆಯು ಮಾನ-ಮಾನವರಲ್ಲಿ ಸಂಬಂಧ ಮಾತ್ರವಲ್ಲ. ಹುಟ್ಟಿ ಬಂದಿರುವ ಜೀವರಾಶಿಗಳಿಗೆ ಆಸರವಾಗಿರುವ ಈ ಜಗತ್ತು ಅಥವಾ ಬ್ರಹ್ಮಾಂಡವು ಶಿವಾತ್ಮ ಇಲ್ಲವೆ ಪರಮಾತತ್ವವನ್ನು ಹೊಂದಿದೆ. ಇದೇ ವಿಶ್ವದ ಮೂಲವು.

"ಕರುಣ ಬಾರದೇನೋ ಸದಾಶಿವಾ |
ಕರುಣ ಬಾರದೇನೋ
ಪುಟ್ಟಿಸಿದೆಲ್ಲೋ ಭೂಮಿ ಈ ಲೋಕದ |
ಕಟ್ಟಲಾಳುವ ಸ್ವಾಮಿ |
ನಿಟ್ಟು ಕೈಲಾಸದ ಪಟ್ಟನಾಳುವ ಸೃಷ್ಟೀಶ ಪ್ರಭುವರಾ||"

ಇದನ್ನೇ ಆದಿ ಅನಾದಿ ಕಾಲದಿಂದಲೂ ನಂಬುತ್ತ ಬಂದ ಪರಂಪರೆಗಳನ್ನು ಶ್ರೀ ಶರೀಫರು ಆಧಾರವಾಗಿಟ್ಟುಕೊಂಡಿದ್ದಾರೆ. ಇವರು ಸೃಷ್ಟಿ ಮತ್ತು ಸೃಷ್ಟಿಯ ಕ್ರಮಗಳ ಕುರಿತು ಬೌದ್ಧಿಕ ಚಾತುರ್ಯವನ್ನೇ ಅದರ ಗೊಂದಲದಲ್ಲಿ ಶಿಲ್ಕಿಕೊಳ್ಳಲಿಲ್ಲ. ಶ್ರುತಿ ಆಗಮ ಪುರಾಣಗಳಿಂದ ವಿಕಾಸಹೊಂದಿದ ಅನುಭಾವಸಾರ ತತ್ವಗಳನುಸಾರವಾಗಿ "ಮೃಡದರ್ಶನಂ ಮೇಲಾದುದು ಷಡುದರುಶನಗಳು ಕೀಳಾದುವು" ಎಂಬ ಹರಿಹರದೇವನ ಉಕ್ತಿದರುಶನದ ಮಹತ್ವ ತಿಳಿದರು. ಇದನ್ನೇ ಪಂಚಮಿಯ ಹಬ್ಬದಲ್ಲಿ ಲೋಕಾನುರಂಜನವಾದ ಜೋಕಾಲೀ ಆಟವನ್ನು ದೇವಲೋಗ-ಮರ್ತ್ಯಲೋಕಗಳ ತಳಕ್ಕು ಹಾಕಲು ಸಾದೃಶ ಸಿದ್ಧಾಂತವನ್ನು ಒಳ್ಳೇ ಸುಲಭವಾಗಿ ಸಾಮಾನ್ಯ ಜನತೆಗೆ ಬಿಂಬಿಸಿದ್ದಾರೆ.

"ತೂಗುತದ ನಿಜ ಬೈಲಲಿ ।
ಜೋಕಾಲಿ ಜೋಲಿ ನಿಗಮಾತೀತ ಜೋಲಿ ।
ಸಾಂಬಲೋಕದ ಮಧ್ಯದಿ ಸವಿಗೊಂಡು ।
ಕಾಂಬ ಸೂತ್ರದ ಸಾಧ್ಯದಿ ।
ಅಂಬರದೊಳವತಾರ ತುಂಬಿ ತುಳುಕುವಂತೆ ।
ಸಾಂಬ ಸಾಕ್ಷಾತನ ಜೋಕಾಲಿ ಜೋಲಿ ಲಾಲಿ ।
ಪೊಡವೆ ಆಕಾಶವು ಏಕಾಗಿ ।
ಇದ್ದಂತೆ ಒಡೆಯ ಕರ್ತೃಕನ ಜೋಕಾಲಿ ಜೋಲಿ ಲಾಲಿ।"

ಹೀಗೆ ಆ ಸೃಷ್ಟಿಕರ್ತನಾದ ಆ ಸಾಂಬನ ಲೀಲಾವಿನೋದಮಯವಾದ ಜಗತ್ತು; ಅವನು ನಿರ್ಮಿಸಿದ ಜೋಕಾಲಿ ಅದನ್ನೇ ಜೀಕಿ ಜೀಕಿ ಸಾಂಬನ ಲೋಕ ಜಯಿಸುವದೇ ಕೈವಲ ಮಾರ್ಗವು. ಇದನ್ನು ಶರೀಫರು ನಂಬಿ-ದ್ದಾರೆ. ಅದನ್ನೇ ಲೋಕಕ್ಕೆ ಹೇಳಿದ್ದಾರೆ. ಈ ಸೃಷ್ಟಿಯ ಸಿದ್ಧಾಂತವನ್ನು ಕುರಿತು ದೃಷ್ಟಿಭೇದಗಳನ್ನು ಇಂದಿನ ಆರಂಭವಾದಿ, ಪರಿಣಾಮವಾದಿ, ವಿವರ್ತವಾದಿ, ಶೂನ್ಯ, ಚಾರ್ವಾಕ ಮತ್ತು ವಿಜ್ಞಾನವಾದಿ(ಭೌತಿಕವಾದಿ) ಮುಂತಾದ ದಾರ್ಶನಿಕರು ಭಿನ್ನ ಭಿನ್ನ ಕೋನದಲ್ಲಿ ಈ ಸೃಷ್ಟಿಕ್ರಮುವನ್ನು ಕುರಿತು ಸಾಪೇಕ್ಷವಾಗಿ ಹೇಳುತ್ತಿರಬಹುದು. ಈ ಬುದ್ಧಿಮಾರ್ಯಾದೆಯ-ಶರ್ಯತ್ತಿಗೆ ಬಿದ್ದು ಶ್ರೀ ಶರೀಫರು ತಮ್ಮ "ಕುದುರೆ"ಯನ್ನು ಸ್ಪರ್ಧೆಗೆ ಹಚ್ಚಲಿಲ್ಲ. ಇವರ ಕುದುರೆ, ಬುದ್ಧಿಯ ಕುದುರೆಯಲ್ಲ, ಅದು ಭಾವದ ಕುದುರೆ.

"ಕುದುರೆ ಹೋಯಿತೆ ಭಾವದ ಕುದುರೆ ಹೋಯಿತೆ ।
ಕುದುರೆ ಹೋಯಿತೆ ಚದುರಮಣಿ ಎನ್ನ ।
ನಜರ ತಪ್ಪಿ ನಿಜಮಂದಿರದೊಳಗಿನ ।"

ಹೀಗೆಯೇ ಶರೀಫರು ತಮ್ಮ ಪದ್ಯಗಳೊಳಗೆ ಕುದುರೆ, ಆನೆ, ಕೋಣ, ನರಿ ನಾಯಿ, ಮಂಗ, ಕಪ್ಪೆ, ಹಾವು-ಚೇಳುಗಳ ಕುರಿತು ಈ ಪ್ರಾಣಿಗಳಿಂದಲೂ ಜೀವ-ಸೃಷ್ಟಿಯ ಕ್ರಮ ಪಾಠಗಳನ್ನು ಕಲಿತಿದ್ದಾರೆ. ತಮಗೆ ಕಂಡುಬರುವ ಅನುಭವಗಳನ್ನು ಜನತೆಗೆ ಹೇಳಿದ್ದಾರೆ. ಒಮ್ಮೊಮ್ಮೆ ಶ್ರೀ ಶರೀಫರು ನುಡಿ-ದಿರುವ ಅನುಭಾವಸಾರಗಳಲ್ಲಿ ಅಡಗಿದ ದಿವ್ಯ ಪ್ರಜ್ಞೆ ಮತ್ತು ಪ್ರತಿಭೆಗಳನ್ನೂ

ಮತ್ತು ಪ್ರಭುಕಾರುಣ್ಯ ಕಾರ್ಯಕಾರಣಗಳನ್ನೂ ತಿಳಿದುಕೊಳ್ಳುವದು ಕಠಿಣವಾಗಿರುವದು.

"ಎಂಥಾ ಮೋಜಿನ ಕುದುರಿ ॥
ಹತ್ತಿದ ಮೇಲೆ ತಿರುಗುವದ್ಹನ್ನೊಂದು ಫೇರಿ ॥ಪ॥
.... .... .... .... .... .... .... ....
ಖಾದರ ಲಿಂಗನು ಪಾಡಿದ ವಾಣಿ ।
ಸೋಸಿನೋಡಿಕೋ ಹಾಕಿದ ಗೋಣಿ ॥
ಪಾಂಡವರ ಮನೆಯೊಳಗೆ ಪಾಗಾದಾಗ ಇತ್ತು ।
ಜಾಡಿಸಿ ಪಾಗಾದ ಗೂಟವ ಕಿತ್ತು ।
ಓಡಿ ಹೋಗುವಾಗ ಶಿಶುನಾಳಿಗೆ ಬಂತು ॥
ಗೋವಿಂದ ನೋಡಿದಾ ತಾನೇ ತಾನಾತು" ॥ ೩ ॥

ಹೀಗೆ ಹೇಳಿದ್ದನ್ನು ಸಾಮಾನ್ಯವಾದ ಮತ್ತು ಸ್ಥೂಲವಾದ ಅರ್ಥ ಮಾಡಿದಾಗ ಶ್ರೀಶರೀಫರು ತಮ್ಮ ಹನ್ನೊಂದನೆಯ ಹಿಂದಣ ಜನ್ಮದಲ್ಲಿ ಪಾಂಡವರ ಲಾಯದಲ್ಲಿ ಪಾಗಾದ ಕುದುರೆಯಾಗಿದ್ದರೆಂಬೂ ಮುಂದೆ ಅನೇಕ ಜನ್ಮ ದಾಟಿ ಈ ಮನುಷ್ಯ ಜನ್ಮಕ್ಕೆ ಬಂದು ಶಿಶುನಾಳ ಗ್ರಾಮದಲ್ಲಿ ಗುರು ಗೋವಿಂದನ ಕೃಪೆಯಿಂದ ಶಿಸುನಾಳಧೀಶನ ದಿವ್ಯ ಜ್ಞಾನದಲಗಳೆ ಹೊತ್ತು ತಿರುಗುವ ಕಾಯಕವು ತನ್ನದೆಂದೂ ಈ ಕುದುರೆಯೇ ತಾನೆಂದೂ ಹೇಳಿದರೆ ಇಂದಿನ ಆಧುನಿಕ ಮತ್ತು ವಿಜ್ಞಾನಯುಗದಲ್ಲಿ ತರ್ಕವಾದಿ(Rationalists) ಗಳು ಡಾರ್ವಿನ್ನನ ವಿಕಾಸವಾದಿ (Evolutionists) ಗಳು ಫ್ರ್ಯಾಡ ಮತ್ತು ರಾಬರ್ಟ ಇನ್‌ಸ್ಟೇನ್ (Theory of Relativity) ಕಾಲಾವಕಾಶ-ಸಂಬಂಧ ವಾದಿಗಳು ಈ ಮಾತಿನ ಸತ್ಯ ಯತಾರ್ಥತೆಗೆ ಮತ್ತು ವಾಸ್ತವತೆಗೆ ಹೇಗೆ ಒಪ್ಪುವರು? ಅಂತೆಯೇ ಶರೀಫರ ಈ ಕಾವ್ಯರಚನೆಯು ಕಲ್ಪನಾವಾದವೆಂದಾಗಲಿ ಭಾವನ ಪರವಶನೆಂದಾಗಲಿ ಕಿತ್ತುಹಾಕಬಹುದು. ಆದರೆ ಶ್ರೀಶರೀಫರು ಲೋಕರಂಜನೆ ಮತ್ತು ಮನರಂಜನೆಗಾಗಿ ಭಾವಗಮ್ಯರಾಗಿ ಉದ್ರಿಕ್ತರಾಗಿ ಹೇಳುವಂತಹ ಸಾಧಾರಣ ಬುದ್ಧಿ ಜೀವಿಯೆಂದು ಗ್ರಹಿಸಬೇಕಾಗುತ್ತದೆ. ಆದರೆ ಇವರು ಯಾವಾಗಲೂ ತಥ್ಯವಿಲ್ಲದೆ ಉದ್ದೇಶರಹಿತರಾಗಿ ದಿವ್ಯ ಪ್ರಜ್ಞೆಯಿಲ್ಲದೆ ಹೇಳುವವರಲ್ಲ.ಕಾರ್ಯರಂಜನೆಯು ಇವರ ಗುರಿಯಾಗಿರದೆ

ದೇವೋನ್ಮಾದದ ದಿವ್ಯ ವಾಣಿಯು ಹೃದಯದಿಂದ ಹೊರ ಹೊಮ್ಮಿದಾಗ ಕಾವ್ಯಧ್ವನಿಯಾಗುವದು. ಹೀಗಿರುವಾಗ ಶ್ರೀಶರೀಫರು ಆ ಮಾತನ್ನು ಸತ್ವ ಯುತವಾಗಿಯೇ ಹಾಡಿದ್ದಾರೆಂದಾಗ ಈ ಪದಗಳ ರಹಸ್ಯವೇನಿರಬಹುದು? ಭಾರತೀಯ ದಾರ್ಶನಿಕರು ಪುನರ್ಜನ್ಮಗಳಲ್ಲಿ ನಂಬುತ್ತಾರೆ. ಮತ್ತು ಮನುಷ್ಯನು ನಾನಾಯೋನಿಗಳಲ್ಲಿ ತಿರುಗಿ ಬರುವನೆಂಬ ಪರಂಪರೆಯು ಸಾಂಪ್ರದಾಯಗಳಲ್ಲಿ ನಂಬುಗೆಯುಂಟು. ಹಾಗು ತ್ರಿಕಾಲಜ್ಞಾನಯೋಗದಲ್ಲಿ ವಿಶ್ವಾಸಗಳುಂಟು. ಮತ್ತು ಅತಿ ಮಾನವನು ಪರಮಾನುಭಾವದಲ್ಲಿ ಕಾಣುವ ಸ್ಫುರಣಾತ್ಮಕ ಪ್ರಕಾಶದ ಅನುಭವದಲ್ಲಿ ವಿಶ್ವಾಸವಿರುವ ಸಿದ್ಧಾಂತಗಳು ಈಗ ಗುಪ್ತಗಾಮಿನಿಯಾಗಿರುವವು. ಈ ಅದೃಶ್ಯ ದಿವ್ಯ ಕಲೆಯ ಸತ್ವ ಶಕ್ತಿಗಳನ್ನು ಇಂದಿನ ವಿಜ್ಞಾನ ಯುಗದಲ್ಲಿ ಜಡ ಭೌತಿಕ ಮತ್ತು ಸ್ಥೂಲವಾಗಿ ವಿಚಾರಿಸುವ ಜಗತ್ತಿಗೆ ಹೇಗೆ ಮನವೊಲಿಸುವದು ಸಾಧ್ಯ? ಶರೀಫರ ಕಾವ್ಯಗಂಗೆಯಲ್ಲಿ ಇಂತಹ ಬಿಡಿಸಲಾರದ ಮುಂಡಿಗೆಗಳು ಸಿಗುವವು. ತರ್ಲಗಟ್ಟದ ಕೆರೆಯಲ್ಲಿ ಶರೀಫರು ಕಪ್ಪೆಯನ್ನು ಕಾಣುವರು.

"ನೋಡಿದ್ಯಾ ಕಪ್ಪೀ ನೋಡಿದ್ಯಾ ॥ ಪ ॥
ಶಿವನ ತೊಡೆಯ ಕೆಳಗಿರುವ ಕಪ್ಪಿ।
ಭವನದಿ ಹಾರಾಡುವ ಹವಣೆಯ ಕಪ್ಪಿ।
ತವಕದಿ ಶಿವನೊರವಿಲೆ ಪೋಗಿ ಲಂಕಾ।
ರಾವಣನ ಸತಿಯಾದಂಥ ಕಪ್ಪಿ।
.... .... .... .... .... .... .... ....

ಮತ್ತು ಕೋಳಿಯನ್ನು ನೋಡಿ—

ಕೋಳಿಯೋ ನೀನು ಕೋಳಿಯೋ।
ಅಚ್ಯುತಗೆಚ್ಚರ ಕೊಟ್ಟಂಥ ಕೋಳಿ।
ಹೆಚ್ಚಿನ ಬ್ರಹ್ಮನು ಮೆಚ್ಚಿದ ಕೋಳಿ।
ಹುಚ್ಚೆದ್ದು ರುದ್ರನ ಕಚ್ಚಿದ ಕೋಳಿ।"

ಆನೆ, ಆಡು, ಹಾವು, ನರಿ, ಚೇಳು, ಬೆಳವ, ಪಾರಿವಾಳಗಳು ಕುರಿತು ಅರ್ಥ ಭಾವಗರ್ಭಿತವಾಗಿ ಹೀಗೆ ಹಾಡುತ್ತಾರೆ. ಶ್ರೀ ಶರೀಫರಿಗೆ ಈ ಪಶು-ಪ್ರಾಣಿಗಳ ಭಾಷೆ-ಭಾವ-ಜೀವಗಳ ಜ್ಞಾನವಿತ್ತೆಂದು ತೋರುತ್ತದೆ. ಪಕ್ಷಿ ಜೀವನ-

ಮನುಷ್ಯ ಜೀವನದಲ್ಲಿ ಒಂದು ಹೊಂದಾಣಿಕೆ,ಸ್ವಭಾವ ಸಮರಸಗಳು ಇರು-
ವವು. ಈ ಜ್ಞಾನದ ಆಳವನ್ನು ಶರೀಫರ ಪದ್ಯಗಳಿಂದ ತಿಳಿಯಬಹುದು.
ನಾಯಿಗಳ ವರ್ಗೀಕರಣ ಮಾಡುತ್ತ ಸಮಾಜದ ಭಿನ್ನ ಭಿನ್ನ ಆಕರ್ಷಕ
ಮತ್ತು ಕೌಟುಂಬಿಕ ವಾತಾವರಣದಲ್ಲಿ ಬೆಳೆದುಬಂದ ನಾಯಿಗಳನ್ನು ವರ್ಣಿ-
ಸುವಾಗ ಅಂದಿನ ಸಾಮಾಜಿಕ ಪರಿಸ್ಥಿತಿಯ ಅಭ್ಯಾಸದ ಪೂರ್ತಿ ಪಾಠವನ್ನೇ
ಕೊಟ್ಟಿದ್ದಾರೆ.ಅಲ್ಲದೆ ಆ ನಾಯಿಗಳ ಸ್ವಭಾವವೂ ಸಹ ಆ ಆರ್ಥಿಕ ಚೌಕಟ್ಟಿ
ನಲ್ಲಿ ಮಿತಿಗೊಂಡು ಪರಸ್ಪರ ತಿಕ್ಕಾಟದಲ್ಲಿ ರೂಪುಗೊಳ್ಳುವದನ್ನು ತೋರಿಸು
ತ್ತಾರೆ.ಜೀವನದ ಆವಶ್ಯಕ ವಸ್ತುಗಳ ಬೇಡಿಕೆ ಪೂರೈಕೆಗಳನ್ನು ಅವಲಂಬಿಸಿ
ಮಿತಿಗೊಂಡಿರುವ ಮಾನವನ ಸ್ವಭಾವವು ವರ್ಗಕಲಹ (Class canflict)
ಕ್ಕೀಡು ಮಾಡುತ್ತಿದೆಯೆಂಬದೊಂದು ಇಂದಿನ ಆರ್ಥಿಕ ಸಿದ್ಧಾಂತವು. ಶ್ರೀ
ಶರೀಫರು ಮಾಡಿದ ಭಿನಭಿನ್ನ ಸಮಾಜದ ನಾಯಿಗಳ ಸ್ವಭಾವ ವಿವರಣೆ-
ಯಿಂದ ಸಮಾಜವಲ್ಲಿನ ತಿಕ್ಕಾಟದ ರೂಪುಗಳನ್ನು ತಿಳಿಯಬಹುದು. ಆದರೆ
ಜಡ ಭೌತಿಕ ದೃಷ್ಟಿಯಿಟ್ಟ ಮಾನವನೆಂಬ ನಾಯಿಯು ಈ ಕಲಹ ಪ್ರಪಂಚ
ಕ್ಕೆಳಿದಿದೆಯೆಂಬ ಭಾವವನ್ನು ವ್ಯಕ್ತಪಡಿಸುತ್ತದೆ.ಹೀಗೆ ಎಲ್ಲ ಪ್ರಾಣಿಪಶುಗಳು
ಜೀವರಾಶಿಗಳು ಒಂದೇ ಸೃಷ್ಟಿಕ್ರಮದ ಆಡಳಿತೆಗೊಳಪಟ್ಟಿವೆ.ಈ ವ್ಯವಹಾರ
ಗಳು ಸೃಷ್ಟಿಕರ್ತನ ಲೀಲೆಯಿಂದ ನಡೆಯುವವೆಂದು ಬಗೆದಿದ್ದಾರೆ. ಹೀಗಾಗಿ
ಸಕಲ ಜೀವರಾಶಿಗಳನ್ನು ಸೂಕ್ಷ್ಮಭಾವದಲ್ಲಿ ಅಳೆದು ಪ್ರತಿಯೊಂದರಲ್ಲಿ
ಸೃಷ್ಟಿಕರ್ತನ ಅಗಾಧವಾದ ಪ್ರತಿಬಿಂಬ ಕಲೆ ನೆಲೆಗಳನ್ನು ಕಂಡಿದ್ದಾರೆ.

**ಹಾಡಿನ ಹಿಂದಿನ ಹಿನ್ನೆಲೆಗಳು :**

ಶ್ರೀ ಶರೀಫರು ಭಾವಜೀವಿ. ರಸಋಷಿ. ಅವರ ಕಾವ್ಯಗಂಗೆಯು
ಅವರ ಹೃದಯಗೀತಗಳು ಆ ಅನುಭಾವದ ಸೆಲೆಯು ಗುಪ್ತಗಾಮಿನಿಯಾಗಿ
ಉಳಿಯದೆ ದೇವೋನ್ಮಾದದಲ್ಲಿ ಹೊರಹೊಮ್ಮಿ ನಿರರ್ಗಳವಾಗಿ ಹರಿದು
ಬಂದಿರುತ್ತವೆ. ಈ ಪದ್ಯಗಳ ಹಿಂದೆ ಒಂದೊಂದು ವಸ್ತುವೂ ಒಂದೊಂದು
ಘಟನೆಗಳೂ ಇರುವವು. ಆದರ ಹಿಂದೆ ಭಕ್ತಿರಸವು ತಳುಕುಬಳಕಾಗಿದೆ. ಈ
ರಸದಲ್ಲಿ ಶೃಂಗಾರವಿಲ್ಲ.ಹೀಗಾಗಿ ಕಾಮುಕವಿಲ್ಲ. ಈ ಕಾವ್ಯಗಂಗೆಯಲ್ಲಿ ಶಾಂತಿ
ರಸವಿದೆ;-ಮಾಯಾರಸವಿದೆ;-ವಾತ್ಸಲ್ಯವಿದೆ;-ಶ್ರದ್ಧೆಯಿದೆ; ಸತೀಭಾವವು

ಪ್ರಾಮುಖ್ಯವಾಗಿದೆ. ಒಂದೊಂದು ಪದ್ಯಗಳು ಬಿಡಿಬಿಡಿಯಾಗಿದ್ದರೂ ಒಂದೊಂದು ಘಟನೆಯಿಂದ ಕೂಡಿಕೊಂಡು, ಆತ್ಮನ ಪರಿಪೂರ್ಣತೆಯ ಸಾಹಿತ್ಯವನ್ನು ನಿರ್ಮಾಣ ಮಾಡಿವೆ. ಸಾಹಿತ್ಯದಲ್ಲಿ ಹೊಸ ಹಾದಿಯನ್ನು ಹುಡುಕಲು ಶ್ರೀ ಶರೀಫರು ಹೊರಡಲಿಲ್ಲ ಅಥವಾ ಪ್ರತ್ಯೇಕ ಸಾಹಿತ್ಯ ವನ್ನು ನಿರ್ಮಿಸಲು ಇಚ್ಛಿಸಲಿಲ್ಲ. ಆತ್ಮಸಂಗದ ಅಂತರಂಗದಲ್ಲಿರುವ ಅನಾದೃಶವಾದ ಭಾವನಾ ವಿಕಾಸವನ್ನು ದೇವೋನ್ಮಾದದ ನಿಬ್ಬೆರಗಿನಲ್ಲಿ ಸೋಹಂ ಭಾವದಲ್ಲಿ ತನ್ನ ಇಷ್ಟದೇವತೆಗೆ ನಾದಬ್ರಹ್ಮನ ನೈವೇದ್ಯವನ್ನು ಸಲ್ಲಿಸಿದ್ದಾರೆ. ಕೇಳಿದವನು ಬರೆದಿಟ್ಟುಕೊಂಡಿದ್ದಾನೆ. ನಾಲಿಗೆಯಿದ್ದವನು ನುಡಿಸುತ್ತ ಬಂದಿದ್ದಾನೆ. ಆದರೆ ಶ್ರೀ ಶರೀಫರು ಸ್ವತಃ ಬರೆದಿಟ್ಟಂತೆ ತೋರುವದಿಲ್ಲ.

"ಬರಕೋ ಪದ ಬರಕೋ ।
ಇದರನ್ವಯ ತಿಳಿಕೋ ।ಪ।
ಪದಮುಲ ಜ್ಞಾನದ ಕುದಿ ಉಕ್ಕಿ ಬರುವಾಗ ।
ನದರಿಟ್ಟು ನಿನ್ನೊಳು ಪದಮುಲ ತತ್ವದಿ ।
ತಿಳಕೋ ಬರಕೋ ।"

ಹೀಗೆ ಶರೀಫರ ಪ್ರಸಾದವಾಣಿಯು ತೆರೆಯಿತೆಂದಾಗ ಸಾಕ್ಷಾತ್ ಸರಸ್ವತಿಯು ದಿವ್ಯ ಪ್ರಭೆಯಿಂದೊಡಗೂಡಿ ಸದ್ಭಾವಗೊಂಡು, ಹೊಂದಿದರೆ ಛಂದಸ್ಸು; ಹೊಂದದಿದ್ದರೆ ತಾಳಬದ್ಧ; ಹೀಗೆ ಪ್ರಸನ್ನಳಾಗುತ್ತಿದ್ದಳು. ಶರೀಫರ ಭಾವ ಭಾಷೆಗಳು ಹಸನವಾಗಿವೆ ಮತ್ತು ಹಗುರಾಗಿವೆ. ಹೀಗಾಗಿ ಜನಸಾಮಾನ್ಯರ ನರಕವಿಗಳಾಗಿದ್ದಾರೆ. ಇನ್ನು ಕವನಗಳನ್ನು ಜನರಾಡುವ ರಾಗ-ತಾಳಗಳಲ್ಲಿ ಹೊಂದಿಸಿದ್ದಾರೆ. ಪ್ರಚಲಿತವಿರುವ ಜನಪದ ಸಾಹಿತ್ಯಕ್ಕೆ ಅಂದರೆ ಲಾವಣಿ ಭಜನೆ, ಬಯಲಾಟ, ಬೀಸುವ ಕಲ್ಲು, ಆರತಿಯ ಪದ ಹೀಗೆ ಎಲ್ಲ ಜಾನಪದ ವೈವಿಧ್ಯತೆಗಳಲ್ಲಿ ಹೊಂದಾಣಿಕೆಮಾಡಿದ್ದಾರೆ. ಜೀವನದ ಎಲ್ಲರಂಗಗಳಲ್ಲಿಯೂ ಅಡ್ಡಾಡಿದ್ದಾರೆ. ಅನುಭವ ಪಡೆದಿದ್ದಾರೆ. ಆ ಲೌಕಿಕ ಪರಿಜ್ಞಾನದ ಕಣಜ ವನ್ನೇ ಈ ಕಾವ್ಯಗಳಲ್ಲಿ ತುಂಬಿದ್ದಾರೆ. ಜೀವನದ ನಿತ್ಯ ಘಟನೆಗಳನ್ನೇ ವಸ್ತುವಾಗಿ ಆರಿಸಿಕೊಂಡು, ಇವುಗಳಲ್ಲಿ ಸಾಮಾಜಿಕ ರೀತಿ-ನೀತಿ, ಹಾವ-ಭಾವ, ಬೆಡಗು ಬಿನ್ನಾಣಗಳನ್ನು, ಒಪ್ಪಿಟ್ಟು, ಭಕ್ತಿರಸದೊಂದಿಗೆ ಮೇಳೈಸಿ

ಹಾಡಿದ್ದಾರೆ. ಬೀಳುವ ಮುದುಕಿ; ಉಡಿಯಕ್ಕಿ ತುಂಬಿಕೊಂಡ ಹುಡುಗಿ; ಸೇದುವ ಚಿಲುಮೆ, ತಿಪ್ಪಿ ಕೆದರುವ ಕೋಳಿ, ಕೆರೆಯೊಳಗಿನ ಕಪ್ಪೆ;ಹಾಡುವ ಬೆಳವ; ಹಾರುವ ಪಾರಿವಾಳ; ಬೊಗಳುವ ನಾಯಿ; ಜೀಕುವ ಜೋಕಾಲಿ; ಎಳೆಯುವ ತೇರು ಮುಂತಾದ ದಿನದ ಸಂಸಾರದಲ್ಲಿ ಕಾಣಬರುವ ವಿಷಯಗಳನ್ನೆತ್ತಿ ಅವುಗಳಲ್ಲಿ ವೈರಾಗ್ಯ ಸಂಪತ್ತನ್ನು ತುಂಬಿ ಸೂರೆಗೊಂಡಿದ್ದಾರೆ. ತನ್ನ ಸುತ್ತಲಿನ ಸಮಾಜದ ರೀತಿ-ನಡತೆಗಳನ್ನು ಭಯಭೀತಿಯಿಲ್ಲದೆ, ಕಠೋರ ಸತ್ಯದಲ್ಲಿ ನುಡಿದಿದ್ದಾರೆ. ಈ ಸಮಾಜ ಜೀವನದಲ್ಲಿ ಹೇಗಿರಬೇಕೆಂಬುವ ನೀತಿಪಾಠಗಳನ್ನೂ ತಿಳಿಸಿದ್ದಾರೆ.

"ಮೂಕನಾಗಿರಬೇಕೋ। ಈ ಜಗದೊಳು। ಜೋಕೆಯಾಗಿರಬೇಕೋ ॥ಪ॥

ಕಾಕು ಕುಹಕರ ಸಂಗನೂಕಿರಬೇಕೋ। ಲೋಕೇಶನೊಳು ಏಕಾಗಿರಬೇಕೊ।
ಕಚ್ಚುವ ನಾಯಿಯಂತೆ ಬೊಗಳುವರೊ
ಎಚ್ಚರಿಲ್ಲದವರೋ । ಉಚ್ಚೇರೊ ನಾಚಿಕೆತೊರೆದಿಹರೋ।"

ಹೀಗೆ ಸಮಾಜ ಜೀವನದಲ್ಲಿ ಕಂಡುಬರುವ ದೋಷಗಳನ್ನು ಲೋಕ ನಿಂದೆಗಳಿಗೆ ಲೆಕ್ಕಿಸದೆ ನಿರ್ದಾಕ್ಷಿಣ್ಯವಾಗಿ ಟೀಕಿಸಿದ್ದಾರೆ. ಇವರ ಪದ್ಯಗಳಲ್ಲಿ ಕಳಕಳಿಯಿದೆ, ಕನಿಕರವಿದೆ, ಕಾರುಣ್ಯವಿದೆ, ವಾತ್ಸಲ್ಯವಿದೆ, ಹೀಗಾಗಿ ಶರೀಫರ ಮಾರ್ಗವು ಹಸನಾದ ಹಾದಿಯಾಗಿದೆ.

**ಅಂತ್ಯದರ್ಶನ :**

ಶ್ರೀ ಶರೀಫರು ತಮ್ಮ ೭೦ ನೆಯ ವರ್ಷದಲ್ಲಿ ಅಂದರೆ ಕ್ರಿ.ಶ. ೧೮೮೯ ಮಾರ್ಚ ೭ರಂದು ಹುಟ್ಟಿದದಿನವೇ ದೇಹಬಿಟ್ಟರು. ದೇಹ ಬಿಡುವ ಮುಂಚಿತ ಪರಮಾತ್ಮನಲ್ಲಿ ತಮ್ಮ ಆತ್ಮದ ಸಮರಸದ ಐಕ್ಯದಿನದ ಮುಹೂರ್ತವನ್ನು ಅನುಭಾವ ಸಿದ್ಧಿಯಿಂದ ದೊರೆಯುವ ದಿವ್ಯ ಜ್ಞಾನಮುಖೇನ ತಿಳಿದಿದ್ದರು. ಶರೀಫರು ಕೊನೆಕೊನೆಗೆ ಈ ದೇವೋನ್ಮಾದದ ಸಿಬ್ಬೆರಗಿನಲ್ಲಿ ದೇಹದ ಮೇಲಿನ ಪರಿವೆ ಪ್ರಜ್ಞೆಗಳಿಲ್ಲದೆ ಇರುತ್ತಿದ್ದರು. ಕೊನೆಯ ಪದ್ಯದಲ್ಲಿ

"ಬಿಡತೇನಿ ದೇಹ ಬಿಡತೇನಿ ॥ ಪ ॥
ಕೊಡತೇನಿ ಭೂಮಿಗೆ । ಇಡತೇನಿ ಮಹಿಮರ ನಡತೇಯ ಹಿಡಿದು ।
ಅವನಿಯೊಳ್ ಶಿಶುನಿನಾಳಧೀಶನೇ । ಗತಿ
ಯೆಂದು । ಜವನ ಬಾಧೆಯು ಗೆದ್ದು
ಶಿವಲೋಕದೊಳಗೆ ನಾ ॥ ಬಿಡತೇನಿ ದೇಹ ಬಿಡತೇನಿ''

ಹೀಗೆಂದು ತಮ್ಮ ಬಡ ದೇಹವನ್ನು ಬಿಡುವದನ್ನು ನಿಶ್ಚಯಿಸಿಕೊಂಡರು. ಸ್ಮಶಾನದ ಸಾಂಪ್ರದಾಯಗಳನ್ನು ಪಾಲಿಸುವದಕ್ಕೆ ಶ್ರೀಶರೀಫರ ಹತ್ತರ ಬಿಡಿ ಕಾಸುಗಳೂ ಕೂಡಾ ಇದ್ದಿರಲಿಲ್ಲ. ಇದ್ದ ಆಸ್ತಿ ಮನೆ-ಮಾರುಗಳನ್ನು ಆರು ತಿಂಗಳ ಹಿಂದೆಯೇ ಸಾಲದ ಭಾರವನ್ನು ತೀರಿಸಲಿಕ್ಕೆಂದು ಮಾರಿಬಿಟ್ಟಿದ್ದರು. ಶಿವಶರಣರ ಮಾರ್ಗವಿಲಂಬಿಗಳಾಗಿರುವದರಿಂದ ಆ ಸಾಂಪ್ರದಾಯದಲ್ಲಿ ಅಂದರೆ ವಿಭೂತಿ ಪತ್ರಿವಿಳೆ ಪೂಜೆ ಮಾಡಿಸಿಕೊಂಡು ಮುಗಿಸಿಕೊಳ್ಳುವ ಇಚ್ಛೆ ಇತ್ತು. ಈ ವಿಧಾನಗಳಿಗೆ ಜಂಗಮನ ಪಾದ-ಪೂಜೆ ಮತ್ತು ಮಸ್ತ-ಕದ ಮೇಲೆ ಪಾದವಿಟ್ಟುಕೊಳ್ಳುವದೂ, ಶಿವನ ಸಾಮಿಪ್ಯ-ಸಾಯುಜ್ಯ ಮಂತ್ರ ಪಠಣಗಳೂ ಅಗತ್ಯವಾಗಿದ್ದವು. ಈ ಕೆಲಸಕ್ಕೆ ಯಾವ ಜಂಗಮನೂ ದೊರೆಯಲಿಲ್ಲ. ಸ್ಥಳೀಯ ಹಿರೇಮಠದ ಗುರುಬಸಯ್ಯನವರು ಇಂಥ ಶರಣನ ಮಸ್ತಕದ ಮೇಲೆ ಪಾದವಿಡಲು ಒಪ್ಪದಾದರು; ಮುಸಲ್ಮಾನ ಸಮಾಜ ಬಂಧುಗಳು ತಮ್ಮ ಸಂಪ್ರದಾಯದಂತೆ ದಫನ ಕ್ರಿಯಾದಿಗಳನ್ನು ಮಾಡುವ ಆಗ್ರಹ ಪಟ್ಟರು. ಜೀವದಿಂದಿರುವಾಗ ಏನು ಮಾಡುವದೆಂದು ದಾರಿಕಾಯ್ದರು. ಎರಡೂ ಸಮಾಜದ ಮುಖಂಡರು, ಹಂದಿಗನೂರ ದೇಶಗತ ಕಾರಭಾರಿಗಳಾದ ರಿತ್ತಿ ಕರಬಸಪ್ಪನವರ ಹಿರಿಯತನದಲ್ಲಿ ಕೂಡಿಕೊಂಡು ಶ್ರೀ ಶರೀಫರ ಇಚ್ಛಾನುಸಾರವಾಗಿ ಹಿರೇಮಠದ ಕರಬಸಯ್ಯನವರ ಪಾದ ಮಸ್ತಕ ಪೂಜೆ ಮಾಡಿಸಿದರು. ಶ್ರೀ ಶರೀಫರು ಅನಿಮಿಷ ದೃಷ್ಟಿಯಿಂದ ಶಿವಯೋಗದ ನಿಲು-ವುಟ್ಟು ಓಂಕಾರ ಪ್ರಭೆಯಲ್ಲಿ ಬಯಲಾದರು. ಪಾರ್ಥಿವ ಶರೀರವನ್ನು ಎಲ್ಲ ಸಮಾಜದವರು ತೇರು ಕಟ್ಟಿ ಆಯಾ ಸಮಾಜಗಳ ಸಾಂಪ್ರದಾಯದಂತೆ ಕುರಾನ, ಕಲಮ ಓದುವದೂ, ಸಕ್ಕರೆ ಹಂಚುವದೂ, ''ಹರಹರ ಮಹಾದೇವ" ''ಅಲ್ಲಾ ಹೋ ಅಕಬರ"ಎಂಬ ಘೋಷಣೆಗಳಿಂದ ಶಿಶುನಾಳ ಗ್ರಾಮದ ಬಳಿಯಲ್ಲಿ ಅವರ ಮನೆತನಕ್ಕೆ ಸೇರಿದ ಬೀಳುಗದ್ದೆಯಲ್ಲಿ, ಶರೀಫರ

ತಂದೆಯ ಸಮಾಧಿಯ ಜೊತೆಗೆ ಅಂತ್ಯವಿಧಿಯನ್ನು ಒಳ್ಳೇವಿಜೃಂಭಣೆಯಿಂದ ಮುಗಿಸಿದರು. ಕಾಲಾಂತರದಿಂದ ಗದ್ದುಗೆಯನ್ನು ಕಟ್ಟಿಸಿದ್ದಾರೆ. ತಂದೆ-ಮಗನ ಇಬ್ಬರ ಸಮಾಧಿಗಳು ಒಂದೆಡೆಯಾಗಿಯೇ ಈಗಲೂ ಪೂಜೆಗೊಳ್ಳು ತ್ತವೆ. ಜೀವನವು ಬೆಲ್ಲ-ಬೇವುಗಳಿದ್ದಂತೆ ಬೇವಿನಮರ, ಮರಕ್ಕೆ ಸುಗಂಧ ಲತೆ ಮಲ್ಲಿಗೆ ಸುತ್ತಿಕೊಂಡು ಶರಣನ ಗದ್ದುಗೆಯ ಸುತ್ತಲೂ ಶಾಂತಿ ಸುವಾ ಸನೆಯಿಂದ ತುಂಬಿ ಭಕ್ತವೃಂದವನ್ನು ಸ್ವಾಗತಿಸುವವು. ಈ ಮಹಿಮನು ಭೂಮಿಯಲ್ಲಿ ಬಿಟ್ಟುಹೋದ ಸತ್ವಶಕ್ತಿಯ ಕುರುಹನ್ನು ಆಯಾ ಸಮಾಜ ದವರು ತಮ್ಮ ಸಾಂಪ್ರದಾಯನುಸಾರವಾಗಿ ಪ್ರತಿನಿತ್ಯ ಪೂಜೆ ಮಾಡುವರು.

ಶರಣವನ್ನು ಮರಣದ ನಂತರ ನೋಡು ಎಂಬ ಗಾದೆಯುಂಟು. ಶರೀರ ವನ್ನು ಹೊತ್ತುಬಂದ ಕಾಲದಿಂದಲೂ ಕೊನೆಯತನಕ "ಪರೋಪಕಾರಾಯ್ಯ ಮಿದಂ ಶರೀರಂ" ಅಲ್ಲದೆ ಸತ್ತಮೇಲೂ ಸಹ ಪರೋಪಕಾರಗಳು ನಡೆಯ ಬೇಕೆಂಬ ಉದ್ದೇಶವಿರುವದು. ಈಗಲೂ ಈ ಸಮಾಧಿಯ ಬಳಿಯಲ್ಲಿ ತ್ರಿವಿಧ ಭಕ್ತಿ-ಶುದ್ಧ-ಸಾತ್ವಿಕ-ದಾಸೋಹ ಭಾವಗಳು ಹುಟ್ಟಬರುವವು. ಈ ಪ್ರೇರಣೆ ಗಳೇ ಕುರುಹುಗಳು.

ಶ್ರೀ ಶರೀಫರ ಮಾರ್ಗದರ್ಶನದಿಂದ ಮಾನವಕೋಟಿಯು ಋಣಿ ಯಾಗಿದೆ. ಮಾನವರೆಲ್ಲರೂ ಒಂದು; ಮಾನವ ಜಲ್ಮ ಶ್ರೇಷ್ಠವೆಂದೂ ಸಿದ್ಧ ಮಾಡಿ ತೋರಿಸಿದರು. ಮಾನವ ಸಮಾಜಕ್ಕೆ ಬೋಧ ಒಂದೇ-ಬ್ರಹ್ಮನಾದ ಒಂದೇ ಸೃಷ್ಟಿಕರ್ತ (ಶಿಶುನಾಳಧೀಶನ) ಭಾಷೆಯೊಂದೇ ಎಂದು ಸಾರಿದರು. ದೇವಲೋಕ-ಜೀವಲೋಕಗಳೆರಡು; ಸಾಧನಕ್ಕೆ ಜೀವಲೋಕವು ಪ್ರಥಮ ಹಂತವೆಂದು ತೋರಿಸಿದರು. ಇದಕ್ಕೆ ನಿರಾತಂಕ ಮಾರ್ಗವು ಭಕ್ತಿಯೊಂದೇ ಸಾಕು ಎಂದು ಸಿದ್ಧಮಾಡಿಕೊಟ್ಟರು. ಶರಣಸತಿ ಲಿಂಗಪತಿಯೆಂಬ ಭಕ್ತಿ ರಸದ ದೀವಿಟಿಗೆಯನ್ನು ಹಚ್ಚಿ ಮಾನವ-ದೇವನಾಗುವ ದಾರಿಯನ್ನು ತೋರಿ-ದನು. ಶರಣ-ಸತ್ಪುರುಷರಿಗೆ ಕಿಂಕರನಾಗ ಭಾವ ತೋರಿ ಅತಿ ಮಾನವನ ಶರಣ ಸ್ಥಳವನ್ನು ತೋರಿದರು. "ಮನುಷ್ಯನೇ ತನ್ನ ಸ್ವಂತ ಭವಿಷ್ಯದ ಶಿಲ್ಪಿ" ಯಾಗಿದ್ದಾನೆಂಬುದನ್ನು ಬೌದ್ಧಿಕ-ಮಾನಸಿಕ-ಭೌತಿಕ-ಆಚಾರ-ವಿಚಾರಗಳಿಂದ ಸ್ಥೂಲ ಜಗತ್ತಿನ ಆಶೆ ವಿಕಾರಗಳಿಂದ ವಿಮುಖನಾಗಿ ಮರಣಾ

ಧೀನನಾಗುವ ಮುಂಚೆ-ಮುಕ್ತನಾಗುವ ಆತ್ಮವಿಚಾರ ಧಾರೆಯನ್ನು ವಿಧಾಯಕವಾಗಿ ಮಾಡಿ ತೋರಿಸಿದರು. ಜನನ—ಮರಣಗಳು ಅಷ್ಟೇ ಪವಿತ್ರವೆಂದೂ, ಸಾವು ಒಂದು ಜೀವಿಯನ್ನೂ ವಿಕಾಸ ಕ್ರಮದಲ್ಲಿ ಒಂದು, ಹೆಜ್ಜೆಯನ್ನೂ ಮುಂದೆ ಒಯ್ಯುತ್ತಿದೆಯೆಂದು ಅನುಭಾವ ಶಾಸ್ತ್ರದಿಂದ ಸಿದ್ಧ ಮಾಡಿಕೊಟ್ಟರು. ಈ ವೈರಾಗ್ಯಮಾರ್ಗದಲ್ಲಿ ಕ್ರಿಯಾಪ್ರಧಾನವಾಗಿ ಮರ್ತ್ಯಲೋಕದ ಪ್ರಯೋಗಾಲಯದಲ್ಲಿ ಸಿದ್ಧಪುರುಷರಾಗಿ ದಾರಿ ತೋರಿಸಿಕೊಟ್ಟಿದ್ದಾರೆ. ಅತ್ಮಾನುಭಾವದಲ್ಲಿ ಕಂಡುಂಡು, ಆಂತರಿಕ ಅಧ್ಯಾತ್ಮ ಶಕ್ತಿಯ ಯಜ್ಞಕುಂಡದಲ್ಲಿ ಪುಟಹೊಂದಿ, ಅನಾದೃಶವಾದ ಅರಿವಿನ ಬಗೆಯಲ್ಲಿ ಕುಂದಣ ಲೇಪಿಸಿಕೊಂಡು, ಬ್ರಹ್ಮಾಂಡ-ಪಿಂಲಾಂಡಗಳ ನೆಲೆಯ ಐಕ್ಯದಲ್ಲಿ ಸುಗಂಧವನ್ನು ಹೂಸಿಕೊಂಡು,ಚಿದಾನಂದ ಶರಣನ ದೃಷ್ಟಿಯಲ್ಲಿ ಸ್ವಯಂ-ಪ್ರಕಾಶನಾಗಿ,ಚಿತ್ರಸಾಮರ್ಥ್ಯ ದಿವ್ಯಜ್ಯೋತಿಯಲ್ಲಿ ಬೆಳಗಿ ಬಯಲಾಗಿದ್ದಾರೆ-ಇವರೊಬ್ಬರು ಹಿಂದಿನ ಶರಣ-ಸಿದ್ಧರ ಪರಂಪರಾನುಗತವಾಗಿ ಬಂದ ದೇವಲೋಕದ ದೂತನಾಗಿದ್ದಾರೆ. ಮಹಾತ್ಮಾಗಾಂಧಿ, ಕಬೀರದಾಸರು ತುಳಿದ ಮಾರ್ಗವನ್ನೇ ರಾಮರಹಿಮ ಈಶ್ವರ ಅಲ್ಲಾ ಬೇರಿಲ್ಲೆಂಬ ಸಾಂಪ್ರದಾಯ-ದವರಾಗಿದ್ದಾರೆ. ಹರಿಹರ-ಹಜರತ ಮಾರ್ಗಗಳೆಲ್ಲವೂ ಮಾನವನನ್ನು ಪರಮಾತ್ಮನೆಡೆಗೆ ಒಯ್ಯುವ ಸಾಧನಗಳಾಗಿವೆಯೆಂದು ನುಡಿದಿದ್ದಾರೆ—ಹಾಗೆ ನಡೆದಿದ್ದಾರೆ.

ಒಟ್ಟಿನಮೇಲೆ-ಶರೀಫರೊಬ್ಬ ಸಿದ್ಧಪುರುಷ; ಇವರ ಹಿಂದೆ ತಪಸ್ಸಿದೆ; ಸಿದ್ಧಾವಸ್ಥೆಯಿದೆ; ಪ್ರಸಾದವಾಣಿಯಿದೆ. ಇವರ ಶಬ್ದಗಳಲ್ಲಿ ಪೌರುಷವಿದೆ; ಪರಾಕ್ರಮವಿದೆ; ಪ್ರಭಾವವಿದೆ, ದೇವೋನ್ಮಾದದ ಸ್ಫೂರ್ತಿಯಿದೆ.ಪ್ರಾಪಂಚಿಕನಾಗಿ ಪಾರಮಾರ್ಥಿಕ ಸಾಧಿಸಿದ ಪ್ರವಾದಿಯೋಗಿಯಾಗಿದ್ದಾರೆ. ಅಂತೆಯೇ ಕರ್ನಾಟಕದ ಕಬೀರನೆಂದು ಪ್ರತೀಕಗೊಂಡಿದ್ದಾರೆ.

ಭೌತ ಶಾಸ್ತ್ರದಲ್ಲಿ ಪ್ರಗತಿಹೊಂದಿದ ಇಂದಿನ ವಿಜ್ಞಾನಯುಗವು ಅಣು, ಪರಮಾಣು. (ATOMIC ENERGIES) ಶಕ್ತಿಗಳಿಂದ ಮಾನವನಿಗೆ ವಿಧಾಯಕ ಮತ್ತು ವಿಧ್ವಂಸಕ ಸಾಧನಗಳಾದ ಶಸ್ತ್ರಾಸ್ತ್ರ (Atomic Weapons) ಹಾಗೂ ಬಾಹ್ಯಾಕಾಶ ಉಡ್ಡಾಣ(SPUTNICK)ಗಳನ್ನು ಸೃಷ್ಟಿಸಿ ಮಾನವನ

ಬುದ್ಧಿಗೆ ಭ್ರಮೆಯನ್ನುಂಟು ಮಾಡಿರುವವು. ಇವೆಲ್ಲವೂ ಜಡ ಭೌತಿಕ— ವಿಧಾನಗಳು. ಸ್ಥೂಲ-ಜಗತ್ತು ಮತ್ತು ಜಡ ಶರೀರಗಳಿಗೆ ಸಮಾಧಾನ ಕೊಡಬಹುದು. ಆದರೆ ಸೂಕ್ಷ್ಮ ತನುವಿನ ಆತ್ಮದ ಹಂಬಲಗಳನ್ನು ಶಮನ ಮಾಡಲಾರೆವು. ಜಡ-ಭೌತಿಕ-ಜಗತ್ತಿನ ಎಲ್ಲ ಅದ್ಭುತ ಸಂಶೋಧನೆಗಳು ಸೂಕ್ಷ್ಮ ಕಾಯದ, ಘನದ-ಮನದ ತೃಪ್ತಿಪಡಿಸಲಾರವು. ಅಲ್ಲದೆ-ಜನನ ಮರಣದಿಂದ ತಪ್ಪಿಸಲಾರವು.

ಜೀವಾತ್ಮನಿಗೆ ಶಾಂತಿ ತರಲಾರವು. ಖಂಡಿತ ಈ ಮಾರ್ಗವನ್ನು ಬಿಟ್ಟು ಪಥಿಕನು ಬಾಹ್ಯ ಸಂಪತ್ತನ್ನು ಕಾಲಾಂತರದಲ್ಲಿ ಬೇಸತ್ತು ತ್ಯಜಿಸಿ ಪುನಃ ಈ ಅಂತರಂಗದ ಶಾಶ್ವತ ಸಂಪತ್ತು-ಆತ್ಮಶಾಂತಿ ಜೀವನ್ಮುಕ್ತ ಗುರಿಗಳತ್ತ ಹುಡುಕದಿರಲಾರನು. ಈ ಪಥಿಕನಿಗೆ ಶ್ರೀ ಶರೀಫರು ಒಬ್ಬರು ಮಾರ್ಗ್ಗದರ್ಶಕರಾಗುವದರಲ್ಲಿ ಸಂದೇಹವಿಲ್ಲ.

— ತಲ್ಲೂರ ರಾಯನಗೌಡರು

# ಶ್ರೀ ಶರೀಫ ಟ್ರಸ್ಟ ಕಮೀಟಿ, ಶಿಶುವಿನಾಳ.

೧. ಶ್ರೀ ಎಸ್. ಆರ್. ಪಾಟೀಲ, (ಚೆಅರಮನ್)

೨. ಶ್ರೀ ಎಲ್. ಬಿ. ಪಾಟೀಲ, (ವ್ಹಾ. ಚೆಅರಮನ್)

೩. ಶ್ರೀ ಎಂ. ಎಸ್. ಭೂಸರೆಡ್ಡಿ, (ಕಾರ್ಯದರ್ಶಿ)

೪. ಡಾ. ಎಸ್. ಕೆ. ಬೆಟದೂರ.

೫. ಶ್ರೀ ಯ. ಸಿ. ದೇವರಮನಿ.

೬. ಶ್ರೀ ಬ. ಬ. ತಿರಕಣ್ಣನವರ.

೭. ಶ್ರೀ ರಘುನಾಥಗೌಡ್ರು ಪಾಟೀಲ, ಕಮಡೊಳ್ಳಿ.

೮. ಶ್ರೀ ಪಾಯಪ್ಪ ಶಿ. ಬ್ಯಾಹಟ್ಟಿ.

೯. ಶ್ರೀ ಶಿ. ಗೂ. ಪಾಟೀಲ

೧೦. ಶ್ರೀ ಎಲ್. ಸಿ ಗವಳೀರ

೧೧. ಶ್ರೀ ಬಿ. ಡಿ. ತಟ್ಟಿ, ಲಕ್ಷ್ಮೇಶ್ವರ.

೧೨. ಶ್ರೀ ಬಸವಣ್ಣೆಪ್ಪ ಗುಂಜಳ, ಕಡಕೋಳ.

೧೩. ಮುದುಕನಗೌಡ್ರು ಪಾಟೀಲ, ಬಟ್ಸೂರ.

೧೪. ಬಸಪ್ಪ ಸುಬರಗಟ್ಟಿ, ಹುಲಗೂರ.

## ಶ್ರೀ ಶರೀಫರ ಕುರಿತು
## ಮಹನೀಯರ ಅಭಿಪ್ರಾಯಗಳು

**ಕರ್ನಾಟಕದ ಕಬೀರ :**

ಇಸ್ಲಾಂ ಹಾಗೂ ಹಿಂದೂ ಸಂಸ್ಕೃತಿಗಳ ಸಮ್ಮಿಳನಗೊಂಡ ಕರ್ನಾಟಕದ ವೈಭವದ ಡೆಂಡಮ ಶ್ರೀ ಶರೀಫರ ಕವಿತ್ವದಲ್ಲಿದೆ. ಕಬೀರನಿಗೆ ಯಾವ ದೃಷ್ಟಿಯಲ್ಲಿಯೂ ಕಡಿಮೆಯಿಲ್ಲದ ಈ ಮಹಾ ಪುರುಷ ಶರೀಫಸಾಹೇಬರು.

— ಪ್ರಿ. ಎಸ್. ಎಸ್. ಮಾಳವಾಡ

‡ ‡ ‡ ‡ ‡ ‡ ‡

**ಹೃದಯದ ಮಾತು :**

ಬುದ್ಧಿಯ ಮಾತಿಗಿಂತ. ಹೃದಯದ ಮಾತು ಹಿರಿದು. ಶಿಶು-ನಾಳ ಶರೀಫಸಾಹೇಬರ ವಾಣಿ ಈ ಮುಕ್ತಾಫಲ ವರ್ಗಕ್ಕೆ ಸೇರಿದುದು. ಮೂರು ಪರಂಪರೆಗಳ ಸುಂದರ ಸಂಗಮವನ್ನು ಅವರ ಹೃದಯ ಪ್ರಯಾಗದಲ್ಲಿ ನಾವು ಕಾಣುತ್ತೇವೆ. ಅವರ ಅನುಭಾವ ನಮ್ಮ ಜೀವನದ ಮಾರ್ಗದರ್ಶನವಾಗಬೇಕಾಗಿದೆ.

— ಪ್ರಿ. ಆರ್. ವಾಯ್ ಧಾರವಾಡಕರ

‡ ‡ ‡ ‡ ‡ ‡ ‡

**ಕಾವ್ಯದಲ್ಲಿ ಸಾಮಾಜಿಕ ಪ್ರಜ್ಞೆ :**

ಶ್ರೀ ಶರೀಫಸಾಹೇಬರ ಪ್ರತಿಯೊಂದು ಪದವೂ ಕೂಡ ಅನುಭಾವದ ಅಚ್ಚಿನಲ್ಲಿ ಹಾಕಿ ಹೊರಬಂದಿರುತ್ತದೆ. ಪ್ರತಿಯೊಂದರಲ್ಲೂ ಒಂದೊಂದು ಸಂಕೇತ, ಅನುಭವ, ತತ್ವ ಹಾಗೂ ಸಾಮಾಜಿಕ ಪ್ರಜ್ಞೆಯಿಂದ ಕೂಡಿದ ಇವರ ಹಾಡುಗಳನ್ನು ಹಾಡಿದ ಹಾಗೆ ಮನಸ್ಸಿಗೆ ಸ್ಫುರಣ ಉಂಟಾಗುತ್ತಿದೆ.

— ಶ್ರೀ ಚನ್ನವೀರ, ಕಣವಿ



ಮುದ್ರಕರು : ಶ್ರೀ ರೇಣುಕಾ ಪಾವರ್ ಪ್ರಿಂ. ಪ್ರೆಸ್, ಹುಬ್ಬಳ್ಳಿ.